ಹಂಡೇಕಾರದಾಸರ ಶಿಷ್ಯರೂ, ಶ್ರೀಜಗನ್ನಾಥದಾಸರಾಯರ
ಪೂರ್ಣಾನುಗ್ರಹಕ್ಕೆ ಪಾತ್ರರಾದ

# ಕನಕಗಿರಿಯ ಶ್ರೀನರಸಿಂಹದಾಸರು(ಕುಂಟೋಜಿದಾಸರು) ಎಂದು ಖ್ಯಾತರಾದ ಶ್ರೀಗುರುಶ್ರೀಶರಾಯರ ಕೃತಿಗಳು

ಗುರುಶ್ರೀಶ ಮಹಂ ವಂದೇ ।
ಗುರುತತ್ವ ವಿಬೋಧಕಂ ॥
ಗುಹಾಶಯ್ಯ ಗುಣಾತೀತಂ ।
ಭಾವಯಂತಂ ಮಹಾಮತಿಂ ॥

# ಶ್ರೀಹುಂಡೇಕಾರದಾಸರ ಶಿಷ್ಯರು, ಅಪರೋಕ್ಷ ಜ್ಞಾನಿಗಳು ಆದ ಶ್ರೀಕನಕಗಿರಿ ನರಸಿಂಹದಾಸರು (ಕುಂಟೋಜಿ ದಾಸರು) ಎಂದು ಪ್ರಖ್ಯಾತರಾದ ಶ್ರೀಗುರುಶ್ರೀಶರಾಯರ ಕೃತಿಗಳು

**ಪದ : ೦೧** **ರಾಗ : ಮೋಹನ, ತಾಳ : ಆದಿ**

ಗುರು ಮಧ್ವರಾಯರಿಗೆ ನಮೋ ನಮೋ ।
ನಮ್ಮ ಗುರುಮಧ್ವ ಸಂತತಿಗೆ ನಮೋ ನಮೋ ॥ ಪ ॥

ಶ್ರೀಪಾದರಾಯರಿಗೆ ಗುರುವ್ಯಾಸಮುನಿಗೆ ।
ರಾಘವೇಂದ್ರರಾಯರಿಗೆ ನಮೋ ನಮೋ ।
ವಾದಿರಾಜ ಸ್ವಾಮಿಗಳಿಗೆ ವೈಕುಂಠದಾಸರಿಗೆ ಪು ।
ರಂದರದಾಸರಿಗೆ ನಮೋ ನಮೋ ॥ ೧ ॥

ಗುರು ವಿಜಯದಾಸರಿಗೆ ಭಾಗಣ್ಣದಾಸರಿಗೆ ।
ರಂಗವಲಿದದಾಸರಿಗೆ ನಮೋ ನಮೋ ।
ಪರಮ ವೈರಾಗ್ಯಶಾಲಿ ತಮ್ಮಣ್ಣದಾಸರಿಗೆ ।
ಹುಂಡೇಕಾರದಾಸರಿಗೆ ನಮೋ ನಮೋ ॥ ೨ ॥

ಗುರುಶ್ರೀಶವಿಠಲನ ಪರಮ ಭಕುತರ ।
ಚರಣಾರವಿಂದಕ್ಕೆ ನಮೋ ನಮೋ ।
ಹರಿ ಗುರುಗಳ ಚರಣದಲಿ ಭಕುತಿ ಕೊಟ್ಟು ।
ಪರಿಪಾಲಿಸು ಎನ್ನಗುರುವೆ ನಮೋ ನಮೋ ॥ ೩ ॥

**ಪದ : ೦೨** **ರಾಗ : , ತಾಳ :**

ಎಂತು ಪೊಗಳಲಿ ಜಗನ್ನಾಥದಾಸರನ ।
ಕಂತುಪಿತ ವಲಿದಿವರ ಅಂತರಂಗದಿ ಪೊಳೆವ ॥ ಪ ॥

ಶ್ರೀ ರಮಾದೇವಿ ಪತಿಯೊಡನೆ ಇವರಲಿನಿಂತು ।
ಈರೆರಡು ದೇಹ ಅವ್ಯಕ್ತ ಸಹಿತ ।
ಆರುನಾಲಕು ತತ್ವದಭಿಮಾನಿಗಳ ಕೂಡಿ ।
ಮೂರು ಗುಣ ಕಾರ್ಯಗಳ ಮಾಡಿ ತೋರ್ಪಳು ಸುಖವ ॥ ೧ ॥

ಚತುರಮುಖ ವಾಯು ನಿಜಸತಿಯರಿಂದೊಡಗೂಡಿ ।
ಇತರ ದೇವತೆಗಳು ಸತತ ಇದ್ದು ।

ವಿತತ ಮಹಿಮನ ಸೇವಿಸುತಲಿ ಸುಜ್ಞಾನವನು ।
ಹಿತದಿಂದಲಿವರಿಗಿತ್ತತಿತೋಷ ಬಡಿಸುವರು ॥ ೨ ॥

ಕರಣಮಾನಿಗಳು ಶಿವ ಇಂದ್ರ ಸೂರ್ಯರು ತಾವು ।
ಇರುವದಧಿಷ್ಠಾನದಲಿ ಹರಿ ಅರ್ಚಿಸಿ ।
ಸುರನರರ ತರತಮವ ಅರುಪಿ ಪಂಚಭೇದವನು ।
ಹರಿದಾಸ್ಯವಿತ್ತು ಅರದೂರರಿವರೆನಿಸುವರು ॥ ೩ ॥

ಈ ಪರಿ ನಿರಂತರದಿ ಆಪಾದಮೌಳಿತನ ।
ಕಾಪಯೋಜಜಮುಖರ ರೂಪಗಳಲಿ ।
ಆ ಪರಮ ಪುರುಷನ ಸುವ್ಯಾಪಾರ ನೋಡುತಲಿ ।
ಅಪಾರಮಹಿಮನ ಸ್ವರೂಪ ಸ್ಮರಿಸುತಲಿ ॥ ೪ ॥

ಈ ಸುಮನಸರ ಮಹಿಮಿ ಸೋಸಿನಲಿ ತಿಳಿದವರ ।
ದಾಸನಾದವನ ಅಘನಾಶವಹದು ।
ಕಾಸಿನಾಸಿಗೆ ನರರ ದಾಸನಾದವನು ಗುರು ।
ಶ್ರೀಶವಿಠಲನ ನಿಜದಾಸರನು ಬಲ್ಲನೆ ॥ ೫ ॥

**ಪದ : ೦೩ ರಾಗ : ಪೂರ್ವಿ, ತಾಳ : ತ್ರಿವಿಡಿ**

ಬಾರೋ ಗುರು ರಾಘವೇಂದ್ರಾ ಬಾರೈಯ್ಯಾ ಬಾಬಾ ॥ ಪ ॥

ಹಿಂದು ಮುಂದಿಲ್ಲೆನಗೆ ನೀ ಗತಿಯೆಂದು ।
ಪೊಂದಿದೆ ನಿನ್ನ ಪಾದವ ।
ಬಂಧನವ ಬಿಡಿಸೆನ್ನ ಕರಪಿಡಿ ನಂದ ।
ಕಂದ ಮುಕುಂದ ಬಂಧೋ ॥ ಅ.ಪ ॥

ಸೇವಕನೆಲೋ ನಾನು ಧಾವಿಸಿ ಬಂದೆನೊ ।
ಸೇವಿಯಕೊಡು ನೀನು ।
ಸೇವಕನ ಸೇವೆಯನು ಸೇವಿಸಿ ।
ಸೇವ್ಯ ಸೇವಕ ಭಾವವೀಯುತ ।
ತಾವುಗಾಣಿಸಿ ಪೊರೆಯೊ ಧರೆಯೊಳು ।
ಪಾವನಾತ್ಮಕ ಕಾವ ಕರುಣಿ ॥ ೧ ॥

ಕರದರೆ ಬರುವಿ ಎಂದು ಸಾರುವದು ಡಂ ।
ಗುರ ತ್ವರಿತದಿ ವೊದಗು ಬಂದು ।

ಜರೆಯ ಬೇಡವೊ ಬರಿದೆ ನಿನ್ನ ।
ವಿರಹ ತಾಳದೆ ಮನದಿ ಕೊರಗುವೆ।
ಹರಿಯ ಸ್ಮರಣೆಯು ನಿರುತದಲಿ ಎನ ।
ಗ್ಹರುಷದಲಿ ನೀ ನಿರುತ ಕೊಡುತಲಿ ॥ ೨ ॥

ನರಹರಿ ಪ್ರೀಯನೆ ಬಾರೊ ಗುರುಶ್ರೀಶವಿಠಲನ ।
ಕರುಣಪಾತ್ರನೆ ಬಾರೋ ।
ಗುರುವರನೆ ಪರಿತೋಷಿಸೆನ್ನನು ।
ಮರೆಯದಲೆ ತವ ಚರಣ ಕೋಟಿಯ ।
ಲಿರಿಸಿ ಚರಣಾಂಬುಜವ ತೋರುತ ।
ತ್ವರಿತದಲಿ ಓಡೋಡಿ ಬಾಬಾ ॥ ೩ ॥

## ಪದ : ೦೪ ರಾಗ : ಧನಾಶ್ರೀ, ತಾಳ : ಝಂಪಿ

ನೋಡೆಲೆ ಮನವೆ ಕೊಂಡಾಡು ಗುರುಗಳ ಪಾದ ।
ಈಡು ಇಲ್ಲವೋ ಪುಣ್ಯಕೆ ।
ನಾಡೊಳಗೆ ಗುರು ರಾಘವೇಂದ್ರರಾಯರ ಸೇವೆ ।
ಮಾಡಿದವ ಪರಮ ಧನ್ಯಾ ಮಾನ್ಯ ॥ ಪ ॥

ನಿಷ್ಠೆಯಿಂದಲಿ ಸ್ಮರಿಸೆ ಕಷ್ಟಗಳು ದೂರ ಮನೋ ।
ಭೀಷ್ಠಿಗಳ ಪೂರೈಪರೊ ।
ಅಷ್ಟ ಸೌಭಾಗ್ಯವನು ಕೊಟ್ಟು ಸುಜನರಿಗೆ ಶ್ರೀ ।
ವಿಷ್ಣುದಾಸ್ಯವ ತೋರ್ಪರೊ ।
ದೃಷ್ಠಿಯಿಂದಲಿ ನೋಡಲನೇಕ ಜನ್ಮದ ಪಾಪ ।
ಬಿಟ್ಟು ಪೋಪವು ಕ್ಷಣದಲೀ ।
ಎಷ್ಟು ಹೇಳಲಿ ಇವರನಿಷ್ಟ ಮಹಾತ್ಮೆಯನು ।
ದುಷ್ಟರಿಗೆ ದೊರೆಯದಿವರ ಸೇವಾ ॥ ೧ ॥

ಹಲವು ಕ್ಷೇತ್ರಗಳ್ಯಾಕೆ ಹಲವು ತೀರ್ಥಗಳ್ಯಾಕೆ ।
ಫಲ ಸುಲಭದಲ್ಲೆ ಇರಲು ।
ಬಲವು ಇದ್ದದರೊಳು ಪ್ರದಕ್ಷಿಣೆ ಸುಪದ ಜಲ ।
ತಲೆಯಲ್ಲಿ ಧರಿಸಿ ನಿತ್ಯಾ ।
ಮಲರಹಿತನು ಆಗಿ ದಂಡ ಪ್ರಣಾಮವ ಮಾಡೆ ।
ವೊಲಿವ ಕರುಣದಲಿ ವೇಗ ।

ಜಲಜನಾಭನು ನಾಲ್ಕು ರೂಪದಿಂದಿವರಲ್ಲಿ ।
ಸಿಲುಕಿ ಪೂಜೆಗೊಂಬನು ಸತತ ಮೋಕ್ಷದಾತ ॥ ೨ ॥

ಹರಿದಾಸರಿದ್ದ ಸ್ಥಳವು ವರಕಾಶಿ ಮೊದಲಾದ ।
ಕುರುಕ್ಷೇತ್ರಕಿಂತಧಿಕವೊ ।
ಸುರ ಋಷಿಮುನಿಗಳು ಇಲ್ಲಿಹರು ವೈಕುಂಠ ।
ಸರಿ ಮಿಗಿಲು ಎಂದೆನಿಪದೊ ।
ಪರಮ ಸುಜ್ಞಾನಿಗಳಿಗೀ ಫಲವು ದೊರಕುವದು ।
ತರತಮದಿ ಇತರ ಜನಕೆ ।
ಗುರುಶ್ರೀಶವಿಠಲನು ಇವರ ರೂಪನಾಮದಲಿ ।
ಪರಿಪರಿ ವರವ ಗರವಾ ಪೊರೆವಾ ॥ ೩ ॥

## ಪದ : ೦೫ ರಾಗ : ಪೂರ್ವಿ, ತಾಳ : ತ್ರಿವಿಡಿ

ಬಾರೋ ಶ್ರೀನರಹರಿಯೆ ।
ಭವಬಂಧ ಮೋಚಕ ಬಾ ಬಾ ಬಾ ॥ ಪ ॥

ನಂದಗೋಪನ ಕಂದಾ ಹರಿ ಮುಕುಂದಾ ।
ಸುಂದರ ಮಂದರೋದ್ಧರಧಾರಾ ।
ಸಿಂಧುಶಯನ ಗೋವಿಂದ ಇಂದಿನ ।
ಮಂದಮತಿಗೆ ಸ್ವಾನಂದವೀಯಲು ಬಾ ಬಾ ಬಾ ॥ ಅ ಪ ॥

ಗಾಢಾಂಧಕಾರದೊಳು ಸ್ವೇಚ್ಛೆಯಲಿ ನಾ ।
ಕಿಡಿಗೇಡಿ ಜೀವ ನಾನಾಗಲು ।
ನೀಡದಂದಲಿಪ್ಪ ಲಿಂಗದೊಳಾಡು ।
ತಾಡುತ ದೂಡಿ ಎನ್ನನು ।
ಬೇಡಿಗೊಳಿಸಿ ಕಾಡೊಳಟ್ಟಿದಿ ।
ನಾಡ ರಕ್ಷಿಪ ಗಾಡಿಕಾರನೆ ॥ ೧ ॥

ಏಸು ಜನ್ಮಗಳ್ಹೋದವೊ ಈ ವಿಧದಿ ಮು ।
ನ್ನೇಸು ಜನ್ಮಗಳುಳಿದವೊ ।
ದಾಸ ನಾನಿಹೆ ಕ್ಲೇಶದಿಂದಲಿ ।
ಘಾಸಿಯಾಗುವೆ ಮೋಸಮಾಡದೆ ।
ಶ್ರೀಶ ನೀ ಭವಪಾಶ ಕಡದೆನ್ನಾ ।
ಶೆ ಪೂರ್ತಿಸೊ ವಾಸುದೇವನೆ ॥ ೨ ॥

ಪ್ರಾರಬ್ಧವದು ಯಾವದೊ ನಿನ್ನಿಚ್ಛೆಯಲ್ಲದೆ ।
ಬೇರಿಹುದಲ್ಲವದು ।
ದಾರಿಗಾಣಿನೋ ದೂರ ನೋಡದೆ ।
ಪಾರ ಮಾಡ್ವದನಂತಮಹಿಮನೆ ।
ಸೇರಿಸೆನ್ನ ರಮೇಶ ಪಾದಕೆ ।
ಸೇರಿಸೆನ್ನ (ಮಾರಪಿತ) ಗುರುಶ್ರೀಶವಿಠ್ಠಲ ॥ ೩ ॥

**ಪದ : ೦೬** **ರಾಗ : , ತಾಳ :**

ಕಂಡೆ ಪಂಢರಿರಾಯನಾ ಕಂಡೆ ನಾ ಪಂಢರಿರಾಯನಾ ॥ ಪ ॥

ಪಂಢರಿರಾಯನ ಪುಂಡಲೀಕವರದನ ।
ಪಾಂಡವರ ಪ್ರೀಯ ಉದ್ದಂಡ ಮಹಿಮನಾ ॥ ಅ ಪ ॥

ದೀನಪಾಲನಾ ಗಾನಪ್ರಿಯನಾ ।
ದೀನಜನರ ಸುರಧೇನು ಯನಿಪನಾ ॥ ೧ ॥

ಜಗದ್ವ್ಯಾಪಕನ ಜಗದ್ರಕ್ಷಕನ ।
ಜಗನ್ನಿಯಾಮಕ ಜಗದೋದ್ಧಾರನಾ ॥ ೨ ॥

ಧಾರುಣೀಶನಾಪಾರಮಹಿಮನಾ ।
ಮಾರುತೀಶ ಗುರುಶ್ರೀಶವಿಠಲನಾ ॥ ೩ ॥

**ಪದ : ೦೭** **ರಾಗ : , ತಾಳ : ಅಟ್ಟ**

ಗೋವಿಂದಾ ನಿನ್ನಾ ಪಾದವ ಕಂಡೆ ।
ಆವಜನ್ಮದ ಸುಕೃತವು ವದಗಿತೊ ।
ಪಾವನಮೂರ್ತಿ ನಿನ್ನ ಪಾದವ ಕಂಡೆ ॥ ಪ ॥

ಗಂಗೆಯ ಪಡದು ಜಗಂಗಳ ಪಾಪವ ।
ಹಿಂಗಿಸುತ್ತಿಹ್ಯ ಶ್ರೀರಂಗ ಮೂರುತಿಯಾ ॥ ೧ ॥

ಬಲಿಯ ಬಾಗಿಲ ಕಾಯ್ದು ಶಿಲಿಯನುದ್ಧರಿಸಿದ ।
ತಲಿಯಲಿ ಗಂಗೆಯ ಪೊತ್ತವಗೊಲಿದಾ ॥ ೨ ॥

ದರಶನ ಮಾತ್ರದಿ ದುರಿತಗಳೋಡಿಸಿ ।
ಹರುಷ ಸುರಿಸುತಿಹ್ಯ ಗುರುಶ್ರೀಶವಿಠಲಾ ॥ ೩ ॥

**ಪದ : ೦೮ ರಾಗ : ಯ.ಕಾಂಬೋದಿ, ತಾಳ :**

ನಂಬೊ ನಂಬೆಲೆ ಮನವೆ ಶ್ರೀಹರಿಯ ಚರಣಾ ।
ನಂಬೊ ನಂಬೆಲೆ ಮನವೆ ।
ನಂಬೊ ನಂಬೊ ಹರಿಯಚರಣವ ।
ನಂಬಿದವರ ಪಾದಾಂಬುಜವ ನೆರೆ ।
ನಂಬಿ ಕುಜನರ ಹಂಬಲಿಸದಲೆ ।
ಸಂಭ್ರಮದಿ ಪದೋಪದಿಗೆ ಮರಿಯಾದೆ ॥ ಪ ॥

ನಿನ್ನ ವೃತ್ತಿಯು ಚಂಚಲಾ ಆದರು ಏನು ।
ಇನ್ನು ವಿಷಯಗಳಲ್ಲಿ ಚರಿಸಿದರೇನು ।
ಸಂಣಾ ಮನುಜರ ನುಡಿ ಕೇಳಿದರೇನು ।
ಪನ್ನಗಾದ್ರಿವಾಸ ಶ್ರೀಶನಾ ।
ಘನ್ನ ಮಹಿಮಿಯು ಎಂದು ತಿಳಿದು ।
ನಿನ್ನ ಹೊರತೆನಗನ್ನ್ಯರಿಲ್ಲವೋ ।
ಚನ್ನಕೇಶವ ಪಾಲಿಸೆಂದು ॥ ೧ ॥

ಭಕ್ತವತ್ಸಲ ಶ್ರೀಹರಿ ಅಪರಿಮಿತ ।
ಶಕ್ತನೊ ಮುರವೈರಿ ಅಪಾರಮಹಿಮಾ ।
ಮುಕ್ತಿದಾಯಕ ನರಹರೀ ।
ಭಕ್ತಿಯಿಂದಲಿ ಸ್ತುತಿಸಿದರೆ ಅಭಿ ।
ವ್ಯಕ್ತಿ ಜ್ಞಾನಾನಂದ ಕೊಡುವಾ ।
ಸಕ್ತನಾಗದೆ ವಿಷಯದಲಿ ಇದು ।
ಯುಕ್ತ ಮಾರ್ಗವು ಎಂದು ತಿಳಿದೂ ॥ ೨ ॥

ಹರಿನಾಮ ನುಡಿನುಡಿಗೆ ಮರಿಯದಲೆ ।
ಸ್ಮರಿಸೂತಾ ಸುಜನರೀಗೆ ಆ ।
ದರಿಂದಾ ಯರಗೋ ಚರಣಗಳಿಗೆ ।
ಭರದಿ ಬಂದು ಗಜೇಂದ್ರಗೊಲಿದಾ ।
ತೆರದಿ ತನ್ನನು ನಂಬಿದವರಘ।
ತರಿದು ಮಹಸುಖ ಕರದು ಕರುಣದಿ ।
ಪೊರೆವ ಗುರುಶ್ರೀಶಾವಿಠ್ಠಲನಾ ॥ ೩ ॥

**ಪದ : ೦೯** **ರಾಗ : , ತಾಳ : ಅಟ್ಟ**

ಹೊತ್ತು ಹೋಯಿತಲ್ಲಾ ಹರಿ ನಿನ್ನ ಭೃತ್ಯನಾಗಲಿಲ್ಲಾ ।
ಮತ್ತೆ ಮತ್ತೆ ಉನ್ಮತ್ತರ ಸಂಗದಿ ।
ಉತ್ತುಮರಿಗೆ ಕರವೆತ್ತಿ ಮುಗಿಯದಲೆ ॥ ಪ ॥

ನಿತ್ಯ ನಿತ್ಯದಲ್ಲಿ ಪರರಾ ।
ವಿತ್ತವೆ ಬಯಸುತಲೀ ।
ಹತ್ತಿ ಹೊಂದಿದವರೆಂದು ಮೋಹಕೆ ಬಿದ್ದು ।
ಚಿತ್ತಜಪಿತನೇಕ ಚಿತ್ತದಿ ಸ್ಮರಿಸದೆ ॥ ೧ ॥

ಕುಜನರ ಬಳಿವಿಡಿದು ಸುಕರ್ಮವು ।
ಯಜನಾದಿಗಳ ಜರಿದೂ ।
ಭುಜಗಶಯನ ನಿನ್ನ ಭಜಿನಿಯ ಮಾಡುವ ।
ಸುಜನರ ಚರಣಾಂಬುಜವನೆ ಪಿಡಿಯದೆ ॥ ೨ ॥

ಉದರ ಭರಣಗಾಗಿ ಸರ್ವದ ।
ಅಧಮರ ಹಿಂದೆ ತಿರಗೀ ।
ಬುಧರ ಸೇವೆಯು ಮಾಡಿ ಹೃದಯಕಮಲದಲಿ ।
ಪದುಮನಾಭನ ಪಾದ ಮುದದಿ ಧೇನಿಸದೆ ॥ ೩ ॥

ಜ್ಞಾನವಂತರ ಸಂಗಾ ಮಂದ ।
ಜ್ಞಾನಿಗೇನೊ ರಂಗಾ ।
ದೀನವತ್ಸಲ ನೀ ದೀನರಿಗಲ್ಲದಲೆ ।
ಹೀನ ಗುಣದವನಿಗೇನು ಗತಿಯೊ ಕೃಷ್ಣ ॥ ೪ ॥

ಪರಮಪುರುಷ ಹರಿಯೆ ಎನ್ನ ನೀ ।
ಕರಪಿಡಿಯೊ ಧೊರಿಯೆ ।
ಅರಘಳಿಗಾದರು ಗುರುಶ್ರೀಶವಿಠಲ ।
ಪರಮಪಾವನ ನಿನ್ನ ಚರಣವ ಸ್ಮರಿಸದೆ ॥ ೫ ॥

**ಪದ : ೧೦** **ರಾಗ : , ತಾಳ :**

ಕಂತುಪಿತನ ಸ್ಮರಿಸಿ ನಿಶ್ಚಿಂತನಾಗೆಲೊ ಸಕಲ ।
ಚಿಂತಿಗಳ ಪರಿಹರವೋ ।

ಎಂತು ಪೇಳಲಿ ಸಂತ ಸಂಗದಲಿ ಶ್ರೀಲಕ್ಷ್ಮಿ ।
ಕಾಂತನ ಕೊಂಡಾಡೆಲೊ ಮನವೆ ॥ ಪ ॥

ರೊಕ್ಕ ಇದ್ದರೆ ಚಿಂತಿ ಇಲ್ಲದಿದ್ದರೆ ಚಿಂತೆ ।
ಮಕ್ಕಳು ಬೇಕೆಂಬೊ ಚಿಂತೆ ।
ಚಿಕ್ಕವರನ ಹ್ಯಾಗೆ ಸಾಕಬೇಕೆಂಬೊ ಚಿಂತೆ ।
ಲಕ್ಷುಮೀಶ ಪಾದಕರ್ಪಿಸೋದೆ ನಿಶ್ಚಿಂತೆ ॥ ೧ ॥

ನರಸೇವೆ ಚಿಂತೆ ಅರಸುತನ ಮಹಚಿಂತೆ ।
ಪರರ ಬೇಡುವದೆ ಚಿಂತೆ ।
ಪರಿಪರಿ ಕರ್ಮದಲಿ ಸರ್ವತ್ರ ಮರಿಯದಲೆ ।
ಹರಿಚರಣ ಚಿಂತನವೆ ಪರಮ ನಿಶ್ಚಿಂತೆ ॥ ೨ ॥

ಆಶೆಯೆ ಚಿಂತಿ ನಿರಾಶಯೆ ನಿಶ್ಚಿಂತಿ ।
ದಾಸನಾಗದೆ ಚಿಂತೆ ।
ದಾಸಪೋಷಕ ಗುರುಶ್ರೀಶವಿಠಲನ ಭವದ ।
ಪಾಶ ಬಿಡಿಸುವ ಕೊಡುವ ಹರುಷ ನಿಶ್ಚಿಂತಿ ॥ ೩ ॥

**ಪದ : ೧೧** **ರಾಗ : , ತಾಳ :**

ದಾಸನಾಗೋ ಮನವೇ ಶ್ರೀಹರಿ ।
ದಾಸನಾಗೊ ಮನವೆ ।
ದಾಸನಾಗಿ ವಿಷಯದಾಸಿಗೆ ಸಿಲ್ಕಿ ನೀ ।
ಮೋಸ ಹೋಗಿ ನರದಾಸನಾಗದೆ ॥ ಪ ॥

ಅನ್ಯಾಯೋಚನೆ ಮಾಡದೆ ಶ್ರೀಹರಿಪಾದ ।
ವನ್ನು ಕೊಂಡಾಡಿದರೆ ।
ಘನ್ನಮಹಿಮ ಕ್ಷಣ ತನ್ನವರಗಲದೆ ।
ಚನ್ನಾಗಿ ಸಲಹುವನೆಂದು ತಿಳಿದು ॥ ೧ ॥

ಎಲ್ಲಿ ನೋಡಿದರಲ್ಲಿ ನಮ್ಮ ಲಕ್ಷ್ಮೀ ।
ವಲ್ಲಭಾ ನಿಲ್ಲದಿಲ್ಲಾ ।
ಫುಲ್ಲನಾಭನ ಮರದಲ್ಲೀಹ ಜೀವಗೆ ।
ಹಲ್ಲು ತೆರೆಯಕೊಡಬಲ್ಲನೇನೊ ॥ ೨ ॥

ದಾಸಾಭಾಸಕನಾಗಾದೆ ಮನದಿ ।
ಶ್ರೀನಿವಾಸನ್ನ ನೆನಸು ಕಂಡ್ಯಾ ।
ವಾಸುದೇವನ ನಿಜದಾಸರ ಪಾದ ಸೇ ।
ವಿಸು ಬಿಡದೆ ಗುರುಶ್ರೀಶವಿಠ್ಠಲನ ॥ ೩ ॥

**ಪದ : ೧೨ ರಾಗ : ನೀಲಾಂಬರಿ, ತಾಳ : ಅಟ್ಟ**

ಶ್ರೀರಮಣನೆ ಇನ್ನು ಆರಿಗುಸರಲಿ ।
ಕಾರುಣ್ಯನಿಧಿ ನೀ ವಿಚಾರಿಸದಿದ್ದರೆ ॥ ಪ ॥

ಹರಿ ನಿನ್ನ ಸ್ಮರಣೆ ಬಿಡದಲಿರಲಂದೇ ।
ಹರಿದಾಸರ ಸಂಗ ಬೇಡಿದೆ ವಂದೆ ।
ಅರಿಷಡ್ವರ್ಗಗಳ ಆಟಗಳ ಖಂಡ್ರಿಸಿಂದೆ ।
ಧೊರಿಯೆ ಎನ್ನೀಪರಿ ಪರಿಪಾಲಿಸೆಂದಾರೆ ।
ಪರಮ ಪಾಪಗಳೆಲ್ಲಾಚರಣೆ ಮಾಡಿಸಿದಾರೆ ॥ ೧ ॥

ನಿನ್ನಾಜ್ಞದಲಿ ನಾ ಭೂಮಿಯೊಳು ಜನಸಿದೆ ।
ಮುನ್ನೆ ನೀ ಪ್ರೇರಿಸಿದಂತ್ಯಾಚರಿಸಿದೆ ।
ಎನ್ನಿಂಥವ ಮತ್ತು ಘನ್ನ ಭವದೊಳಿಟ್ಟು ।
ಬನ್ನಬಡಿಸಿದಾರೆ ಎನ್ನಿಂದಾಗುವದೇನೊ ॥ ೨ ॥

ಶ್ರೀಪರಮಾತ್ಮ ನೀನಿಲ್ಲಾದಾ ಸ್ಥಾನಾ ।
ಈ ಪಯೋಜಜಾಂಡದೊಳಗೆ ಕಾಣೆನೊ ನಾ ।
ವ್ಯಾಪಕಾ ನೀ ಮಾಡಿಸಿದ್ದೆ ಪ್ರಧಾನಾ ।
ಜ್ಞಾಪಕಾಗೊಳಿಸಿದೆ ಗುರುಶ್ರೀಶವಿಠಲಾ ।
ಕೋಪದಾ ಮಾತಲ್ಲಾ ಆಪುತ ಬಂಧೂ ॥ ೩ ॥

**ಪದ : ೧೩ ರಾಗ : – , ತಾಳ : –**

ಶ್ರೀಹರಿಯಾ ಮರೆಯಾದಿರು ಮನವೆ ।
ಶ್ರೀಹರಿಯಾ ಮರೆಯದಿರು ಮನವೆ ॥ ಪ ॥

ಪರಿಪರಿ ಭಕತರ ಮರಿಯದೆ ಸಲಹುವಾ ।
ಕರುಣಾರ್ಣವ ನರಹರಿಯಾ ಮುರವೈರಿಯಾ ॥ ೧ ॥

ಸಾರಾವಿಲ್ಲದ ಸಂಸಾರದಿ ನೀನು ।
ದಾರಾದಿಗಳ ನೀ ನೆಚ್ಚೆ ಮದ ಹೆಚ್ಚೆ ಮೃಷಕೊಚ್ಚೆ ॥ ೨ ॥

ಉದರಗೋಸುಗ ನೀ ಅಧಮರ ತುತಿಸೀ ಬುಧರ ।
ಪಾದವ ಬಿಡುಬ್ಯಾಡ ನಂಬೊಗಾಡಾ ಎಲೊ ಮೂಢಾ ॥ ೩ ॥

ಈ ಸಮಯವು ಬಾರದು ಶ್ರೀಹರಿಯಾ ದಾಸರ ।
ದಾಸ ನೀನಾಗೊ ಮೊರೆ ಹೋಗೊ ಭವ ನೀಗೊ ॥ ೪ ॥

ಗುರುಶ್ರೀಶವಿಠಲನ ಚರಣವ ನಂಬೊ ।
ಕೋರಿದಭಿಷ್ಟಿಯ ಕೊಡುವಾ ಅಘ ಕಡಿವಾ ಕರಪಿಡಿವಾ ॥ ೫ ॥

**ಪದ : ೧೪ ರಾಗ : ರೇಗುಪ್ತಿ, ತಾಳ : –**

ಹೋಗುತಿದೆ ಹೊತ್ತು ಬರಿದೆ ವೃಥಾ ಶ್ರೀ ।
ಹರಿ ಹರಿ ಹರಿ ಹರಿ ಹರಿ ಎನದೆ ॥ ಪ ॥

ನಾನೆ ಫಳಿಸಿತಂದೆ ಹೆಂಡರ ಮಕ್ಕಳಾ ।
ನಾನೆ ಸಾಕಿ ಸಲಹುವೆನೆಂಬ ಗರ್ವಾ ।
ದೀನವತ್ಸಲ ನಾನಾ ಠಾವಿಲಿ ।
ತಾನೆ ವ್ಯಾಪಕನಾಗಿ ಪೊರೆವನ ಸ್ಮರಿಸದೆ ॥ ೧ ॥

ಸೃಷ್ಟಿಮಾಡುವನ್ಯಾರು ಸ್ಥಿತಿಯ ಮಾಡುವನ್ಯಾರು ।
ಕಷ್ಟಗಳನು ಪರಿಹರಿಸುವನ್ಯಾರೊ ।
ಸೃಷ್ಟಿಗೊಡಿಯನಾದ ಕೃಷ್ಣನೆಂದರಿಯಾದೆ ।
ಹೊಟ್ಟೆ ಹೊರುವೆ ಮಟ್ಟೆ ಮರುಳಾಗಿ ಸ್ವಾಮಿ ॥ ೨ ॥

ಪರಮಪುರುಷ ರಂಗ ಸಕಲ ರೂಪಗಳಲ್ಲಿ ।
ನಿರುತಾದಿಂದಲ್ಲಿ ನಿಂತು ಸುರರಾ ಕೈಯ್ಯಾ ।
ಪರಿಪರಿ ಸೇವೆಯಾ ತೆಗೆದುಕೊಂಬುವನೆಂದು ।
ಗುರುಶ್ರೀಶವಿಠಲನ್ನ ಚರಣವ ಸ್ಮರಿಸಾದೆ ॥ ೩ ॥

**ಪದ : ೧೫ ರಾಗ : ಶ್ರೀರಾಗ, ತಾಳ : ಆದಿ**

ನಾರಾಯಣ ಗೋವಿಂದ ಹರಿನಾರಾಯಣ ಗೋವಿಂದಾ ।
ನಾರಾಯಣ ಗೋವಿಂದ ಮುಕ್ಕುಂದಾ ।
ನರವರ ಸುರರಾನಂದಾ ಹರಿ ॥ ಪ ॥

ವಂದೆ ಮನದಿ ಬುಧರಿಂದ ಕೇಳಿ ಕಥೆ ।
ತಂದರೆ ಮನಕಾನಂದಾ ॥ ೧ ॥

ಪರಮ ಭಕುತಿಯಲಿ ಹರಿಗುಣ ಕೀರ್ತಿಸೆ ।
ಪೊರವನು ದೇವಕಿ ಕಂದಾ ॥ ೨ ॥

ಹರಿ ಸರ್ವೋತ್ತಮಾ ಸುರರೊಡಿಯನು ಎಂದು ।
ಸ್ಮರಿಸಲು ನಿತ್ಯಾನಂದಾ ॥ ೩ ॥

ಹರಿದಾಸರ ಸಂದರುಶನ ಪುಣ್ಯವು ।
ಅರಿದರೆ ಪರಮಾನಂದಾ ॥ ೪ ॥

ಕಂಡಕಂಡಲ್ಲಿ ತನ್ನ ಕಂಡು ಅರ್ಚಿಸುವ ।
ತೋಂಡರ ಬಿಡೆ ನಾನೆಂದಾ ॥ ೫ ॥

ಕೃಷ್ಣಗೆ ವಂದನೆ ಅಷ್ಟಾಂಗದಿ ಮಾಡೆ ।
ಪುಟ್ಟಿಸ ಪುನರಪಿ ಎಂದಾ ॥ ೬ ॥

ಸಕಲ ವಿಬುಧರನು ಭಕುತಿಲಿ ಸೇವಿಸೆ ।
ಮುಕುತಿರೊಳಗವ ಬಂದಾ ॥ ೭ ॥

ಶ್ರೀಯರಸನು ತನ್ನ ಪ್ರಿಯನೆಂದವ ಯನ್ನ ।
ಮಾಯವ ದಾಟಿದನೆಂದಾ ॥ ೮ ॥

ತನುಮನಧನಗಳ ಚಿನುಮಯಗೊಪ್ಪಿಸಿದ ।
ವನು ಹರಿ ಪುರದಲಿ ನಿಂದಾ ॥ ೯ ॥

ನವವಿಧ ಭಕುತಿಯು ಪವನನೈಯ್ಯನಲಿ ।
ವಿವರಿಸಿ ಮಾಡಲು ಛಂದಾ ॥ ೧೦ ॥

ಗುರುಶ್ರೀಶವಿಠ್ಠಲನು ಪರಮ ಕರುಣದೀ ।
ಪರಿಯಲಿ ಆಚರಿಸೆಂದಾ ॥ ೧೧ ॥

**ಪದ : ೧೬** **ರಾಗ : , ತಾಳ : ತ್ರಿವಿಡಿ**

ಮಧುರಿಗೆ ಪೋಗಬ್ಯಾಡವೋ ಕೃಷ್ಣಾ ಬ್ಯಾಡವೊ ।
ಬೇಡಿಕೊಂಬೆವೊ ಇಲ್ಲೆ ಇರು ಪೋಗಬ್ಯಾಡವೊ ॥ ಪ ॥

ಜನನಿ ಜನಕರನ್ನ ಮರೆದು ನಮ್ಮ ।
ಮನಿಯ ಮಕ್ಕಳನೆಲ್ಲಾ ತೊರದೂ ಸ್ವಾಮಿ ।

ಮನಸಿಜಪಿತ ನೀನು ಅನಿಮಿತ್ತಬಂಧು ಇಂದು ।
ಕನಸಿನೊಳಗೆ ಸಹಾ ನೆನೆವೆವೊ ಮರಿಯಾದೆ ।
ಚಿನುಮಯಮೂರುತಿ ಅನಿಮಿಷರೊಡಿಯನೆ ।
ಜನುಮಜನುಮದಲಿ ನಮ್ಮನ ಅಗಲ ಬ್ಯಾಡವೊ ॥ ೧ ॥

ಉದಯದಲೆದ್ದು ನಿನ್ನ ಪಾದವ ನೋಡಿ ।
ಮುದದಿಂದಾಡುವೆವಲ್ಲೊ ಮಾಧವಾ ಅವ ।
ಕದನಗಡಿಕ ಕಂಸಾ ಸದನಕೆ ಬಾಯೆಂದಾ ।
ಮಧುವೈರಿ ನೀನೆಂಬೊದರಿಯನೊ ಮದಗರ್ವಾ ।
ಶ್ರೀಧರ ನಿಮ್ಮಯ ಪಾದಕೆ ನಮಿಪೆವು ।
ಸೋದರಮಾವನ ಊರಿಗೆ ಪೋಗಬ್ಯಾಡವೊ ॥ ೨ ॥

ಊರು ವಳಗೆ ನಮಗೆಲ್ಲರು ಮಹಾ ।
ಜಾರರು ಇವರೆಂದು ಪೇಳ್ವರೂ ಸ್ವಾಮಿ ।
ದೂರಿದರ್‍ಯಾತಕೆ ದೂರವಲ್ಲರೊ ಕೃಷ್ಣ ।
ಮೋರಿಯ ನೋಡದೆ ನಾವಿರಲಾರೆವು ।
ಊರಿಗೆ ಪೋದರೆ ಬಾರದೆ ನಿಲ್ಲೆವೊ ।
ದಾರಿಯ ತೋರಿಸು ಗುರುಶ್ರೀಶವಿಠ್ಠಲಾ ॥ ೩ ॥

**ಪದ : ೧೭** **ರಾಗ : – , ತಾಳ : –**

ಶ್ರೀನಿವಾಸ ದಯಾನಿಧೆ ॥ ಪ ॥

ಭಾನುಕೋಟಿತೇಜ ಲಾವಣ್ಯಮೂರುತಿ ।
ಶ್ರೀವೆಂಕಟೇಶನೆ ನಮೊನಮೊ ॥ ಅ ಪ ॥

ಶೇಷಾಚಲನಿವಾಸಾ ದೋಷರಹಿತ ಭಕ್ತ ।
ಪೋಷಕ ಶ್ರೀಕಾಂತ ನಮೊನಮೊ ॥ ೧ ॥

ನೀಲಮೇಘಶ್ಯಾಮ ಪಾಲವಾರುಧಿಶಾಯಿ ।
ಶ್ರೀಲಕುಮೀಶನೆ ನಮೊನಮೊ ॥ ೨ ॥

ಖಗರಾಜವಾಹನ್ನ ಜಗದೊಡಿಯನೆ ನಿನ್ನಾ ।
ಅಗಣಿತ ಮಹಿಮೆಗೆ ನಮೊನಮೊ ॥ ೩ ॥

ಶಂಕ ಚಕ್ರಧರ ವೆಂಕಟರಮಣ ।
ಅಕಳಂಕ ಚರಿತ ದೇವ ನಮೊನಮೊ ॥ ೪ ॥

ಪನ್ನಂಗಶಯನನನೆ ನಿನ್ನಂಥ ದೇವರು ।
ಇನ್ನುಂಟೆ ಅಜಭವ ಸುರರೊಂದ್ಯಾ ॥ ೫ ॥

ಸೃಷ್ಠಿ ಇಲ್ಲದಲೇವೆ ವತ್ತಟ್ಟಲಿದ್ದವರನ್ನ ।
ಸೃಷ್ಠಿಸಿ ಜೀವರ ಸಲಹುವಿ ॥ ೬ ॥

ತನುಮನ ಕರಣಗಳನ್ನು ಕೊಟ್ಟು ನೀ ।
ಅನಿಮಿಷರನು ಅಭಿಮಾನಿ ಎನಿಸೀದೀ ॥ ೭ ॥

ವೈಷಮ್ಯ ನೈರ್ಘಣ್ಯ ಲೇಶವಿಲ್ಲವರ ।
ಉಪಾಸನದಂತೆ ಫಲಗಳೀವೀ ॥ ೮ ॥

ಒಂದು ರೂಪದಿ ಬಹಳ ಮಂದಿಯೊಳಗೆ ಇದ್ದು ।
ಬಂಧಮೋಕ್ಷಪ್ರದ ನೆನಿಸೂವಿ ॥ ೯ ॥

ಕ್ಷಣ ಬಿಡದಲೆ ಭಕ್ತ ಜನರ ರಕ್ಷಿಸುವೆ ।
ದುರ್ಜನರಿಗೆ ದುರ್ಲಭನೆನಿಸುವೀ ॥ ೧೦ ॥

ನಂಬೀದೆ ನಾ ನಿನ್ನ ಬಿಂಬಮೂರುತಿ ಯನ್ನ ।
ಡಿಂಬದೊಳಗೆ ಪೊಳಿ ಅನುದಿನಾ ॥ ೧೧ ॥

ದುರ್ಜನಸಂಗವು ವರ್ಜ ಮಾಡಿಸಿ ಸಾಧು ।
ಸಜ್ಜನರ ಸೇವಿಯೊಳಿಡಿಸಯ್ಯಾ ॥ ೧೨ ॥

ಎನ್ನಪ್ಪ ಎನ್ನಣ್ಣಾ ಎನ್ನ ಕಾಯುವ ದೇವ ।
ನಿನ್ನ ವಿಸ್ಮೃತಿಯ ಕೊಡದಿರೊ ॥ ೧೩ ॥

ಏಸು ಜನ್ಮಗಳೀಯ್ಯೆ ಲೇಶಚಿಂತಿಯು ಇಲ್ಲಾ ।
ದಾಸನೆಂದೆನಿಸೊ ದಾಸ್ಯವನಿತ್ತು ॥ ೧೪ ॥

ಮನಸೀನ ಚಂಚಲವನು ಬಿಡಿಸಿ ಪಾದ ।
ವನಜದಲ್ಲಿಡಿಸಯ್ಯಾ ಜಿತವಾಗಿ ॥ ೧೫ ॥

ಕರಣಗಳಿಂದ ಆಚರಿಪ ಕ್ರಿಯಗಳೆಲ್ಲ ।
ಹರಿ ನಿನ್ನ ಸೇವಿಯಾಗಲಿ ಸ್ವಾಮಿ ॥ ೧೬ ॥

ಬುದ್ಧಿಪೂರ್ವಕ ಗುರುಮಧ್ವರಾಯರ ಮತ ।
ಪೊದ್ದಿದವನೆ ಜ್ಞಾನವೃದ್ಧನೊ ॥ ೧೭ ॥

ಗುರುಗಳ ಕರುಣ ಸುಸ್ಥಿರವಾಗಿದ್ದವರಲ್ಲಿ ।
ಹರಿ ನಿನ್ನನುಗ್ರಹವಾಗೋದೊ ॥ ೧೮ ॥

ನಿನ್ನ ಚಿತ್ತಕ್ಕೆ ಬಂದದ್ದೆನ್ನ ಚಿತ್ತಕೆ ಬರಲಿ ।
ಅನ್ಯಥಾ ಬಯಕೀಯ ಕೊಡದಿರೊ ॥ ೧೯ ॥

ನಿನ್ನವರಲ್ಲದೆ ಅನ್ನ್ಯರು ಬಲ್ಲರೆ ।
ಘನ್ನ ಮಾತಿನ ಸವಿಸುಖವನು ॥ ೨೦ ॥

ನಿನ್ನ ಹೊರತು ಎನಗನ್ನ್ಯರಿಂದೇನಯ್ಯಾ ।
ನಿನ್ನ ಸ್ತುತಿಪ ಸುಖಕೆಣೆಗಾಣೆ ॥ ೨೧ ॥

ಘನ್ನ ಮಹಿಮ ಎನಗಿನ್ನೊಂದು ಬಯಕಿಲ್ಲಾ ।
ನಿನ್ನ ಧ್ಯಾನದಲಿಡೊ ಮರಿಯಾದೆ ॥ ೨೨ ॥

ದೀನವತ್ಸಲ ನಿನ್ನಧೀನರೊಳಗಿದ್ದು ।
ಜ್ಞಾನ ಕರ್ಮಗಳ ಮಾಡಿಸುವಿಯೋ ॥ ೨೩ ॥

ಹರಿಯು ಸರ್ವೋತ್ತುಮ ಸುರರೆಲ್ಲ ದಾಸರೂ ।
ತರತಮಭೇದ ಜ್ಞಾನವನೀಯೊ ॥ ೨೪ ॥

ಜ್ಞಾನಿಗಳರಸ ಅಜ್ಞಾನಿಗಳೊಳು ನಾ ಅ ।
ಜ್ಞಾನಿ ಸುಜ್ಞಾನವು ಪಾಲಿಸೋ ॥ ೨೫ ॥

ಸ್ತುತಿರತ್ನಮಾಲಾ ಸಂಸ್ತುತಿಸಿ ಹಿಗ್ಗುವರಿಗೆ ।
ಪ್ರತಿದಿನದಲಿ ಸುಖವೃದ್ಧಿಯು ॥ ೨೬ ॥

ಗುರುಗಳು ಮಧ್ವರಾಯರು ಮೂರು ಲೋಕಕ್ಕೆ ।
ಧೊರೆ ಗುರುಶ್ರೀಶವಿಠ್ಠಲ ॥ ೨೭ ॥

**ಪದ : ೧೮ ರಾಗ : ರೇಗುಪ್ತಿ, ತಾಳ : ತ್ರಿವಿಡಿ**

ಮನವೆ ಪೇಳುವೆ ನಿನಗೆ ಮರ್ಮದಾ ಮಾತುಗಳ ।
ದಿನವು ಕಳಿಯಾದೆ ತ್ವರಿತಾದಿ ತಿಳಿದಾರಾನಂದಾ ॥ ಪ ॥

ವರ್ಣ ಉತ್ತುಮದೊಳಗೆ ಘನ್ನ ವೈಷ್ಣವಾ ಜನ್ಮಾ ।
ಚನ್ನಾಗಿ ತಿಳಿಯೊ ಶ್ರೀಹನುಮ ಗುರುವೆ ।

ಪನ್ನಂಗಶಯನಾ ಯನ್ನಾಳುವ ವಡಿಯಾನು ।
ಜನ್ಮಜನ್ಮಾಂತರದ ಪುಣ್ಯದ ಫಲವೊ ॥ ೧ ॥

ಮಾತುಮಾತಿಗೆ ಹರಿಯಾ ನಾಮವು ನೆನವೂತ ।
ವಾತಮತದುತ್ತುಮರ ವಂದಿಸೊ ಸತತಾ ।
ನೀತಿ ಶಾಸ್ತ್ರವನು ಪ್ರಖ್ಯಾತ ಜನರ ತಿಳಿದು ।
ಆತ್ಮ ನಿಶ್ಚಯಾ ಮಾಡೊ ಭೀತಿ ನಿನಗಿಲ್ಲಾ ॥ ೨ ॥

ಪರಸತಿ ಪರಧನ ಪರಹಿಂಸಾ ಪರನಿಂದಾ ।
ಪರಮಪಾಪಗಳಲ್ಲಿ ಚರಿಸಾದಿರು ಕಂಡ್ಯಾ ।
ಗುರುಶ್ರೀಶವಿಠಲನ್ನ ಚರಣಾವ ಸ್ಮರಿಸೂವ ।
ಪರಮ ಭಾಗವತರಣುಗನೆಂದೆನಿಸೊ ॥ ೩ ॥

**ಪದ : ೧೯ ರಾಗ : ಮೋಹನ, ತಾಳ : ಅಟ್ಟ**

ಕರ್ಮವೆಂದರೆ ಯಾವುದೊ ಸ್ವ ।
ಕರ್ಮದ ಮರ್ಮವ ಮೀಟುವದೊ ॥ ಪ ॥
ಕರ್ಮಜ ಕರ್ಮದ ಗರ್ವವನಳಿಯೊ ॥ ಅ ಪ ॥

ತನು ನಿನ್ನದಲ್ಲವೆಂದು ನಿನ್ನವರೆಲ್ಲ ।
ಅನುದಿನ ಸಾರ್ವರಿಂದೂ ।
ಮನಬಂದ ತೆರದಲಿ ಅನಿಮಿಷರೊಡಯಾ ತಾ ।
ಅನುಕೂಲದಿಂದಲಿ ಅನುವರ್ತಿಸುವಂಥಾ ॥ ೧ ॥

ಬಂಧನದಲ್ಲಿರುವ ಅನುಬಂಧಿಗಳ ।
ಹಿಂದೆ ಬೆನ್ಹತ್ತಿರುವಾ ।
ಅಂಧನಾದ ನಿನಗ್ಹಿಂದಿನ ಕರ್ಮವೆ ।
ಇಂದಿನ ಕರ್ಮವೆಂದರಿಯೊ ಮಂದಮತಿ ॥ ೨ ॥

ಜ್ಞಾನೇಚ್ಛಾ ಕ್ರೀಯಾ ಶಕ್ತಿಗಳ್ ನಿನ್ನೊಳಗಿದ್ದು ।
ದೀನವತ್ಸಲ ಹರಿಯ ।
ಮಾನಸೇಚ್ಛಾಗಾಧೀನವಾಗಿರುವ ನೀ ।
ನೇನು ಮಾಡುವಿ ನಿಧಾನಿಸಿ ನೋಡೆಲೊ ॥ ೩ ॥

ಮಾಡಿದ್ದೆ ಮಾಡಬೇಕು ಶ್ರೀಹರಿಯು ತಾ ।
ನಾಡಿದ್ದೆನಾಡಬೇಕು ।

ಪಾಡುತ್ತ ಅವನ ಕೊಂಡಾಡುತ್ತ ಕರ್ಮವ ।
ನೀಡುತ್ತ ರೂಢಿಯೊಳ್ ಆಡುವೋದೇ ಕರ್ಮ ॥ ೪ ॥

ಗುರುಶ್ರೀಶವಿಠಲನು ಗುರುಮುಖದಿಂದ ।
ಅರುಹಿದ ಮಾತಿದನು ।
ಅರಿತು ಮರಿಯದೆ ಸ್ಮರಿಸುತ್ತಲವನನು ।
ಹರುಷದಿಂದಲಿ ಉತ್ತರಿಸೊ ಭವಾಬ್ಧಿಯ ॥ ೫ ॥

**ಪದ : ೨೦ ರಾಗ : – , ತಾಳ : –**

ಏನು ಬೇಡಲಿ ಶ್ರೀನಿವಾಸನೆ ನಿನ್ನ ಧ್ಯಾನದೊಳಿರಿಸೆನ್ನ ॥ ಪ ॥
ನಾನ ವಿಷಯದಿ ಪೋಗಲೀಸದೆ ಮನಸು ನಿಲ್ಲಿಸೊ ನಿನ್ನಲ್ಲೆ ॥ ಅ.ಪ ॥

ನಾನು ನನ್ನದುಯೆಂಬೊ ದುರಭಿಮಾನ ಬಿಡಿಸಯ್ಯ ಸ್ವಧಾಮ ।
ಯೋನಿಯೆಂಬತ್ತುನಾಲ್ಕು ಲಕ್ಷಗಳೆತ್ತಿ ತಿಳಿಯದೆ ಸುತ್ತಿ ಸುತ್ತಿ ।
ಯೇನು ಹೇಳಲಿ ಇನ್ನು ಇದರ ಛಂದ ಅಭಿಮಾನದ ಭಂಗ ।
ಸಾನುರಾಗಕೆ ಬಂಧಕ ಬಿಡಿಸಯ್ಯಾ ನಿನ್ನಲ್ಲೆ ನಿಲ್ಲಿಸಯ್ಯಾ ಜೀಯ್ಯಾ ॥ ೧ ॥

ಎಲ್ಲಿ ನೋಡಿದರಲ್ಲೆ ನಿನ್ನ ರೂಪ ತೋರಯ್ಯ ಭೂಪಾ ।
ಸೊಲ್ಲುಸೊಲ್ಲಿಗೆ ನಿನ್ನ ದಿವ್ಯನಾಮ ನುಡಿಸೈಯ್ಯಾ ಸ್ವಧಾಮ ।
ಫುಲ್ಲನಾಭ ನಿಮ್ಮ ಮಂಗಳ ಕಥೆಗಳನ್ನು ಕೇಳಿಸು ಅನುದಿನಾವೂ ।
ಎಲ್ಲ ಕಾಲಗಳಲ್ಲಿ ನಿಮಗರ್ಪಿತ ಶ್ರೀತುಳಸಿ ಆಘ್ರಾಣಿಸೆಲೊ ಸುಖಿಸಿ ॥ ೨ ॥

ಈಶ ನಿಮ್ಮ ನಿಜದಾಸರ ಸಹವಾಸ ತೋರಯ್ಯಾ ಶ್ರೀಶಾ ।
ಯೇಸು ಜನ್ಮಗಳಿತ್ತರೆ ಲೇಸಯ್ಯ ಪಾಲಿಸು ಯನ್ನೈಯ್ಯ ।
ಭೂಸುರ ದೇಹವಿತ್ತದಕೆ ಮಾತ್ರ ಸಕಲಿದು ಪುರುಷಾರ್ಥ ।
ವಾಸುದೇವ ಗುರುಶ್ರೀಶವಿಠ್ಠಲ ಸ್ವಾಮಿ ಸರ್ವಾಂತರ್ಯಾಮಿ ॥ ೩ ॥

**ಪದ : ೨೧ ರಾಗ : , ತಾಳ :**

ಹರಿಚರಣ ಪದೋಪದಿಗೆ ಸ್ಮರಿಸುತಿರು ಮನವೆ ।
ಬರಿದೆ ವ್ಯಾಳ್ಯ ಕಳಿಯದಿರು ಕಂಡ್ಯ ನೀನು ॥ ಪ ॥

ಪುಟ್ಟಿಸುವಾ ಪಾಲಿಸುವಾ ಕಷ್ಟಗಳನು ಕಳೆವಾ ।
ಮುಟ್ಟಿ ಭಜಿಸುವರಿಗೆ ಇಷ್ಟಾರ್ಥ ಕೊಡುವಾ ।

ಇಟ್ಟಿ ಕಲ್ಲನು ತೆಗೆದು ಕೊಟ್ಟಾ ಭಕುತಗೆ ಒಲಿದ ।
ಶಿಷ್ಟ ಜನರನು ಪೊರೆವಾ ಸೃಷ್ಟಿಗೊಡೆಯಾ ॥ ೧ ॥

ಹಲವು ಚಿಂತಿಗಳಿಂದ ಫಲವೇನೊ ಮನದೊಳಗೆ ।
ಜಲಜನಾಭನ ಮೂರ್ತಿ ನಿಲಿಸಿ ನಲಿನಲಿದು ।
ನೋಡು ಕೊಂಡಾಡು ಲೀಲೆಯ ಭವದ ಮೂಲ ।
ಕೀಳುವ ಸ್ವಾಮಿ ಮೋದವನೆ ಕೊಡುವ ಸ್ವಾಮಿ ॥ ೨ ॥

ಗುರುಶ್ರೀಶವಿಠ್ಠಲನ ಪರಮ ಭಕ್ತರ ಪಾದಕ್ಕೆ ।
ಶಿರಬಾಗಿ ಮನ್ನಿಸೋ ಸತತ ।
ಹರಿದಾಸರಾ ದಾಸರ ದಾಸನೆನಿಸು ।
ವರ ದಾಸನಾಗಿ ನೀ ಸುಖಿಸು ॥ ೩ ॥

**ಪದ : ೨೨ ಫಲಸ್ತುತಿ ಭಾಮಿನಿ ಷಟ್ಪದಿ**

ದಾಸವರ್ಯರದಾಸ ಕರ್ಜಗಿ ।
ದಾಸರೆಂಬರ ಈ ಸುವಾಕ್ಯ ಉ ।
ದಾಸೀನವ ಮಾಡದಿರಿ ಶ್ರೀಹರಿದಾಸರಾದವರೂ ।
ಕಾಶಿ ಮೊದಲಾದ ಸುಕ್ಷೇತ್ರದಿ ।
ವಾಸ ಮಾಡಲು ಈ ಸುಜನ ಸಹ ।
ವಾಸ ಫಲ ದೊರಕುವದೆ ಶೋಧಿಸೆ ಸಕಲ ಶಾಸ್ತ್ರದಲೀ ॥ ೧ ॥

ಶ್ರೀವರನ ದಾಸರಿಗೆ ಭಕುತಿಲಿ ।
ಸೇವಕನು ನಾನೆಂದು ಪೇಳುವ ।
ಜೀವನವೆ ಸಜ್ಜೀವಿ ಅವ ಹರಿದಾಸನೆಂದರಿದೂ ।
ಆವನಾದರು ಆದಿಯಲಿ ಇದು ।
ಭಾವ ಶುದ್ಧದಿ ಓದಿ ಬರೆಯಲು ।
ಕಾವನಯ್ಯನು ಕರುಣಿಸುವನು ಸದಾ ಕಾಲದಲೀ ॥ ೨ ॥

ಹರಿಕಥಾಮೃತಸಾರ ನೋಡುವ ।
ಪರಮಭಕ್ತರ ಜ್ಞಾನದೃಷ್ಟಿಗೆ ।
ವರಸುಲೊಚನದಂತೆ ಇಪ್ಪವು ಈ ಸುಪದ್ಯಗಳು ।
ಅರಸಿಕರಿಗಿದು ಪೇಳಲಾಗದು ।
ಮುರಹರನ ದಾಸರಿಗೆ ತಪ್ಪದೆ ।
ಹರುಷ ಸುರಿಸುವ ಇಹಪರದಿ ಗುರುಶ್ರೀಶವಿಠ್ಠಲನು ॥ ೩ ॥

**ಪದ : ೨೩** **ರಾಗ : – , ತಾಳ : –**

ಹರಿಯ ಚರಣವ ನಂಬೊ ತ್ವರಿತದಲಿ ।
ಪರಸುಖ ಸಾರಾತ್ಸಾರ ॥ ಪ ॥

ಶ್ರುತಿ ಸ್ಮೃತ್ಯರ್ಥ ಸುಮತಿಜನ ಪೇಳುವ ।
ಕಥಿ ವಿಶ್ವಾಸದೀ ಕೇಳಿ ॥ ೧ ॥

ಅನಘನಮಲಗುಣ ಮನನವಮಾಡಿ ।
ಸೂಜನರ ಕೂಡಿ ಕೊಂಡಾಡಿ ॥ ೨ ॥

ಡಿಂಬದೊಳಗೆ ಯಿಹ ಬಿಂಬನರೂಪವ ।
ಕಾಂಬುವ ಧ್ಯಾನವ ಮಾಡಿ ॥ ೩ ॥

ತ್ರಿಕರ್ಣ ಪೂರ್ವಕ ಸುಖತೀರ್ಥರ ಪದ ।
ಸುಖದಿಂದದರ್ಚನೆ ಮಾಡಿ ॥ ೪ ॥

ಹರುಷದಿ ನಿನ್ನನು ಗುರುಶ್ರೀಶವಿಠಲ ।
ಪೊರವನು ಭಕ್ತನ ಮಾಡಿ ॥ ೫ ॥

**ಪದ : ೨೪** **ರಾಗ : – , ತಾಳ : –**

ಶಂಭೋ ಶಂಕರ ಶಿವನೆ ನಿನ್ನ ಪಾ ।
ದಾಂಬುಜಗಳ ನಂಬಿದೆ ।
ಅಂಬುಜನಾಭನ ಪಾದದಲ್ಲಿ ಮನ ।
ಸಂಭ್ರಮದಿಂದಲಿ ಲೋಲ್ಯಾಡುಸುವ ದಯ ॥ ಪ ॥

ಚಿತ್ತಜಪಿತ ಸಖನೆ ಯನ್ನಯ ಮನೋ ।
ವೃತ್ತಿಗಳನು ಪೇಳುವೆ ।
ಅತ್ತ ಕೆಲವು ಬಾಲತ್ವ ಯವ್ವನ ಉ ।
ನ್ಮತ್ತರ ಸಂಗದಿ ಹೊತ್ತು ಹೋಯಿತು ದೇವ ॥ ೧ ॥

ಕಪ್ಪುಗೊರಳ ಹರನೆ ಯನ್ನಯ ಮಹ ।
ತಪ್ಪುಗಳೆಣಿಸದಲೇ ।
ಸರ್ಪಶಯನ ಹರಿದಾಸರ ಸೇವಿಯೊ ।
ಳಿಪ್ಪ ಮತಿಯಕೊಡು ಸರ್ಪಭೂಷಣನೆ ॥ ೨ ॥

ಕರಿಚರ್ಮಾಂಬರಧರನೆ ಮಹಾದೇವ ।
ಕರಣಪತಿಗಳೀಶನೆ ।
ಗುರುಶ್ರೀಶವಿಠಲನ ಚರಣಕಮಲದಲ್ಲಿ ।
ಪರಮ ಭಕುತಿಕೊಟ್ಟು ಪಾಲಿಸು ಮರೆಯದೆ ॥ ೩ ॥

**ಪದ : ೨೫ ರಾಗ : ಕಾಂಬೊದಿ, ತಾಳ : –**

ಶ್ರೀನಿವಾಸ ನಿನ್ನ ಕಾಣದಲೆ ಮರುಳಾಸೆ ।
ನಾನು ನನ್ನದು ಯೆಂಬೊ ಕೋಣ ಬುದ್ದಿಯಲಿಂದ ॥ ಪ ॥

ತನುವಿನೊಳಗೆ ನೀನು ವನಜಸಂಭವರಿಂದ ।
ಅನುದಿನದಲಿ ಹೃದಯವನಜದೊಳಗೆ ಯಿದ್ದು ।
ಜನುಮಜನುಮಗಳಲ್ಲಿ ಕ್ಷಣ ಬಿಡದಲೆ ಸಲಹುವಿ ।
ಗುಣನಿಯಾಮಕ ನಿನ್ನ ನೆನಸಲಿಲ್ಲವೊ ಸ್ವಾಮಿ ॥ ೧ ॥

ಅನ್ನ ಉದಕದೊಳಗೆ ಅಚ್ಛಿನ್ನನಾಗಿ ಮತ್ತೆ ।
ಯಿನ್ನಿಹದೊಳು ಪ್ರಾಣನ್ನವಳಗೆ ಯಿದ್ದು ।
ಮನ್ನುಮಯನೆನಿಸಿ ಜೀವನ್ನ ತುಷ್ಟಿಯ ಬಡಿಸಿ ।
ಎನ್ನ ಪೋಷಿಸುವಿ ನಾವೊಮ್ಮೆನ್ನ ಧೇನಿಸಲಿಲ್ಲ ॥ ೨ ॥

ಜ್ಞಾನಿಗಳ ಕರುಣಾ ಸಾನುಕೂಲವ ಮಾಡಿ ಜ್ಞಾನವಿಲ್ಲದವಗೆ ವಿ ।
ಜ್ಞಾನವನು ಕೊಟ್ಟು ಅನ್ನಾದಿಯಲಿಯಿದ್ದಜ್ಞಾನವೆ ಕಳೆ ವಿ ।
ಜ್ಞಾನಿಗಳ ಕರುಣ ಸಾನುಕೂಲಮಾಡಿ ।
ಆನಂದಕೊಡುವಿ ನಾನಿನ್ನೇನು ತಿಳಿಯಲಿಲ್ಲ ॥ ೩ ॥

ಯೇನು ಬೇಡಲೊ ನಿನ್ನ ಜ್ಞಾನಿಗಳೊಡೆಯಾನೆ ।
ನಾನಾ ಯೋನಿಯು ಯನಗೆ ನೀನಿಯೆ ಭಯವಿಲ್ಲಾ ।
ನಾನೆಲ್ಲಿ ನೋಡಿದರೆ ನೀನೆ ತೋರಲಿಬೇಕು ।
ಭಾನುಕೋಟಿತೇಜಾ ದೀನಜನರಪಾಲ ॥ ೪ ॥

ಹರಿಯೆ ನಿನ್ನ ನಾಮ ಸ್ಮರಣೆ ಮುಖ್ಯವೆನಗೆ ।
ಅರಲವ ತಪ್ಪದಲೆ ಬರಲೆನ್ನ ಜಿಂಹ್ವೆಗೆ ।
ಹರಿದಾಸರಪಾದ ಶಿರಸಿನಲಿಡಿಸೈಯ್ಯಾ ।
ಗುರುಶ್ರೀಶವಿಠಲ ಯನ್ನ ಹರಿದಾಸನೆಂದೆನಿಸೊ ॥ ೫ ॥

**ಪದ : ೨೬ ರಾಗ : ಕಾಂಬೊದಿ, ತಾಳ : –**

ಯಾಕೆ ಜೀವನವೆ ಶ್ರೀಕಾಂತನ ಮರೆವೆ ವಿ ।
ವೇಕವೆ ನಿನಗಿದೂ ॥ ಪ ॥

ಜೋಕಿಯಿಂದಲಿ ನಿನ್ನಾ ಸಾಕುವ ಶ್ರೀಪತಿ ।
ಬೇಕಾದ ವರವೀವ ಭಕ್ತವತ್ಸಲ ಹರಿ ॥ ಅ.ಪ ॥

ಲೇಶವಾದರು ವಿಷಯದಾಸೆಯ ಬಿಡಲೊಲ್ಲಿ ।
ಏಸು ಜನ್ಮವಾದರು ।
ಕಾಸು ಬಾಳದ ಸಂಸಾರದೊಳು ತೊಳಲುವಿ ।
ಹೇಸಿಕಿಲ್ಲದ ನಿನಗೆ ।
ಈ ಶರೀರವೆ ಎನ್ನದೆಂದು ತಿಳಿದು ನೀ ।
ಸೋಸಿಲಿ ಇರುವೆ ಬೀಳದೆ ।
ದೋಷರಹಿತ ಶ್ರೀನಿವಾಸನ್ನ ತುತಿಸಿ ನೀ ।
ದೋಷ ಕಳದೆನ್ನ ಪೋಷಿಸು ಎನ್ನದಲೆ ॥ ೧ ॥

ಸತಿಸುತರನು ಹ್ಯಾಗೆ ಸಾಕುವದೆಂದು ।
ವೃಥಾ ಅತಿ ಚಿಂತೆ ನಿನಗ್ಯಾತಕೊ ।
ಕ್ಷಿತಿಪತಿ ಲೋಕವನ್ನೆಲ್ಲಾ ಪೊರೆವನಿರಲು ।
ಗತಿ ನಿನ್ನವರಿಗೇನೊ ।
ಗತಿ ನಿನಗಾಗುವ ಹಿತ ಚಿಂತನೆಮಾಡೊ ।
ಮತಿ ಹೀನನಾಗದಲೆ ।
ರತಿಪತಿಪಿತ ಲಕ್ಷ್ಮಿಪತಿ ನೀನೆ ಗತಿಯೆಂದು ।
ಪ್ರತಿಕ್ಷಣ ಹರಿಕಥೆಯನ್ನು ಕೇಳದಲೆ ॥ ೨ ॥

ಹೊಟ್ಟೆಗೋಸುಗ ಕ್ರೀಯಾ ಭ್ರಷ್ಟರ ತುತಿಸಿ ನೀ ।
ಕಷ್ಟವ ಪಡುವದ್ಯಾತಕೊ ।
ಪುಟ್ಟಿಸಿದವ ಗೇಣುಹೊಟ್ಟೆಗೆ ಕೊಡನೇನೊ ।
ಸೃಷ್ಟ್ಯಾದ್ಯಷ್ಟ ಕರ್ತನೂ ।
ಕೆಟ್ಟುಹೋಗದೆ ನೀನು ಶಿಷ್ಟರ ಸೇವಿಸೋದು ।
ದುಷ್ಟ ಗುಣಂಗಳಿದೂ ।
ಎಷ್ಟು ಪೇಳಲಿ ಮನೋಭೀಷ್ಟ ಪೊರೈಸುವ ।
ಸೃಷ್ಟಿಸಿ ಗುರುಶ್ರೀಶವಿಠಲನ್ನ ನೆರೆನಂಬೊ ॥ ೩ ॥

**ಪದ : ೨೭ ರಾಗ : – , ತಾಳ : –**

ನೋಡೆಲೇ ಸಖಿಯೇ ಹರಿ ತಾ । ಮಾಡುವ ವ್ಯಾಪಾರವನ್ನು ।
ಹಾಡಿಪಾಡಿ ಹಿಗ್ಗುವ್ರೋರನ್ನ । ಬೀಡು ಸೇರಿಕೊಂಡಾ ಜನರುಗೆ ॥ ಪ ॥

ಲೋಕವಾ ಪುಟ್ಟಿಸುವ್ರೋನಂತೆ । ಸಾಕುವ್ರೊ ದಾತ ತಾನಂತೆ ।
AiÀÄgÉ ¥ÉÇ¶ÀiÉÆ½ ÀÖd | UÀgÀÁ vÁ PÀÆ £ÀvÁq Ãª £ÀÀvÉ|| ೧ ||

ವಬ್ಬರಿಗೆ ಮುಕ್ತಿಯಂತೆ । ವಬ್ಬರಿಗೆ ಸಂಸಾರವಂತೆ ।
ವಬ್ಬರಿಗೆ ಕರ್ಮವೂ ವೈಷಮ್ಯ । ವಬ್ಬರೀಗೆ ಇಲ್ಲಾವಂತೆ ॥ ೨ ॥

ಯಲ್ಲಾರೊಳಿದ್ದು ಕರ್ಮ । ವೆಲ್ಲ ತಾ ಮಾಡಿಪನಂತೆ ।
ನಿರ್ಲೇಪ ತಾನಾಗಿದ್ದು ತ । ಲ್ಲೇಪ ಜೀವರಿಗಂತೆ ॥ ೩ ॥

ತನ್ನಾನೆ ಕರ್ತನೆಂದೂ । ತನ್ನಾನೇವೇ ಭಜಿಸೆ ।
ತನ್ನಾ ನೆಂಬಿದವಾರೇ । ತನ್ನವಾರವರಂತೆ ॥ ೪ ॥

ಅನ್ಯರು ಮಾಡಿದ ಪುಣ್ಯ । ತನ್ನವರಿಗಿತ್ತು ಪಾಪವನ್ನು ।
ಅನ್ಯರಿಗೆ ಕೊಟ್ಟು । ಬನ್ನಾ ಬಡಿಸುವ್ರೋನಂತೆ ॥ ೫ ॥

ಅರಡು ವಿಧ ಜೀವರು । ಸುರರು ಅಸುರಾರಂತೆ ।
ಹರಿಭಕ್ತರೆ ಸುರರಂತೆ । ಪರರೇ ದೈತ್ಯರಂತಮ್ಮಾ ॥ ೬ ॥

ಧರ್ಮವಂತೆ ಭಕ್ತಾರ ಅ । ಧರ್ಮವಾದರು ಸರಿಯೆ ।
ಧರ್ಮಮಾಡಲಭಕ್ತರು ಅ । ಧರಮವೇ ಆಗೋದಂತೇ ॥ ೭ ॥

ಪಾಪಿ ಅಜಾಮಿಳಾದ್ಯರು ನಿ । ಷ್ಪಾಪಿಗಳೆನಿಸೀದಾರಂತೆ ।
ಈಪರಿ ಭಕ್ತರು ಕೂಡಿ .. । ಕಾಪ್ಯಾಡಿ ಸುಖಸುರಿಸುವ್ರೋನಂತೆ ॥ ೮ ॥

ಅರಿಯದೀ ಸುದಿಮಗಳ ನಾ ಬರಿದೆ ಕಳಕಂಡೆವಮ್ಮಾ ।
ಗುರುಶ್ರೀಶವಿಠಲನ್ನ ಚರಣ ನಂಬುವ್ರೋದೇ ಸುಖಾ ॥ ೯ ॥

**ಪದ : ೨೮ ರಾಗ : – , ತಾಳ : –**

ರಂಗ ಎಲ್ಲಿ ಮಮತೆ ಕೊಟ್ಟಾರೇನಯ್ಯ ಸ್ವಾಮಿ ।
ಅಲ್ಲಲ್ಲೆ ನಿನ್ನ ಧ್ಯಾನ ಮಾಡಿಸೋ ॥ ಪ ॥

ತನುವುನಲ್ಲಾ್ಯಗಲಿ ತನ್ನವರಲ್ಲಾ್ಯಗಲಿ ।
ಧನ ಮೊದಲಾದ ಮೂರು ಸ್ಥಳದಲ್ಲಿ ।
ಅನುಮಾನವಿಲ್ಲದೆ ತನ್ನನೆ ಭಜಿಸಲು ।
ಘನ್ನ ಭವವು ದೂರಾಗದೇ ॥ ೧ ॥

ಇಂದ್ರಿಯಗಳು ವಿಷಯದಲಿ ಸಂಚರಿಸಲು ।
ಇಂದ್ರಿಯ ಧೊರಿ ಮಾನವಲ್ಲಾವೇ ।
ನಂದಿವಾಹನ ಮನದ್ವಡಿಯನಾದವನ ।
ತಂದಿ ತಂದಿಗೊಪ್ಪಿಸಿದರೆ ಸಾಲದೇ ಈಗಾ ॥ ೨ ॥

ಹರಿಯೆ ಯನಗೆ ಇಂದು ಆರಲಾದಿ ಯಂಬಿನೇ ।
ಧೊರಿಯೆ ಯನಗೆ ದೂರ ಯಲ್ಲಾ್ಯದ್ಯೋ ।
ಕರುಣಸಾಗರ ನಿನ್ನ ಹೃದಯದೊಳು ಜಗವೆಲ್ಲಾ ।
ಪಾರ ಮಹಿಮಾ ನೀ ಯನ್ನೊಳು ॥ ೩ ॥

ನಿನ್ನ ಹಂಬಲ ಯನ್ನ ಹೃದಯದೊಳು ಇರಲಾಗಿ ।
ಇನ್ನು ವಿಷಯಂಗಾಳು ದಾವದೊ ।
ನಿನ್ನ ಸಂಕಲ್ಪವು ಭಕತವತ್ಸಲನೆಂದು ।
ಘನ್ನ ಬಿರಿದು ನಾನು ಕೇಳಿದೆ ।

ಮರಿಯಾದೆ ಜಗದೊಳು ಹರಿಯೆ ಮಾಡುವೊ ಲೀಲೆ ।
ಸ್ಥಿರವೆಂದು ಧೃಡ ಭಕ್ತಿ ಮಾಡಿಸೊ ।
ಗುರುಶ್ರೀಶವಿಠಲನೆ ಪರಮ ಭಕತರ ।
ಚರಣ ಸೇವಿಯ ಕೊಟ್ಟು ಪಾಲಿಸೊ ॥ ೫ ॥

**ಪದ : ೨೯ ರಾಗ : , ತಾಳ :**

ಕರುಣಿಸೊ ಸ್ವಾಮಿ ಶ್ರೀ ನರಹರಿಯೆ ಭಕತರ ಘನ ಸಿರಿಯೆ ।
ಹರಿ ನಿನ್ನ ಚರಿತೆಯವರುಪಿ ಮನಸುಖ ಸುರಿಸಿ ।
ದುರಿತ ಪರಿಹರಿಸೆಲೋ ಧೊರಿಯೆ ॥ ಪ ॥

ಯರವಿನ ದೇಹಾ ಸತಿಸುತರಲ್ಲಿ ಪರಮಾನುರಾಗದಲಿ ।
ಬ್ಯರದು ದುರ್ವಿಷಯ ಲಂಪಟದಲ್ಲಿ ಕರಕರಿಗೊಳುತಿರಲಿ ।
ಪರಿಪರಿ ನೀ ನೀ ಸರ್ವರೋಳು ವಿಹರಿಸಿ ।
ಪರಿತಿಳಿಸದಲಿರೆ ಅರುಹಲಿನ್ಯಾರಿಗೊ ॥ ೧ ॥

ಸರ್ವ ತತ್ವಂಗಳೊಳಗೆ ವ್ಯಾಪ್ತಾ ಸರ್ವರಿಗೆ ಆಪ್ತಾ ।
ಸರ್ವಾ ಬಗೆಯಿಂದ ಸಲಹುವ ಗುಪ್ತಾ ಸ್ಮರಿಸುವರಿಗೆ ಪ್ರಾಪ್ತಾ ।
ಸರ್ವರೊಡೆಯ ಸರ್ವಜ್ಞ ನಿನಗೆ ನಾ ।
ನೋರ್ವ ಯರವೇ ಕರಿವರದ ಕೃಪಾಳೋ ॥ ೨ ॥

ಯೇನು ಬೇಡಲಿ ನಿನಗೆ ಸ್ವಾಮಿ ಸರ್ವಾಂತರ್ಯಾಮಿ ।
ಜ್ಞಾನವಿಲ್ಲಾದೆ ನಾ ಬಹು ಕಾಮಿಯಾದರೇನು ಪ್ರೇಮ ।
ಈ ನೀತಿಯು ಇರೆ ಗುರುಶ್ರೀಶವಿಠ್ಠಲ್ಲ ।
ಇನ್ಯಾತರ ಭಯ ನಿನ್ನಾಳುಗಳಿಗೆ ॥ ೩ ॥

**ಪದ : ೩೦** **ರಾಗ : , ತಾಳ :**

ನೋಡುವ ಬನ್ನಿರೆ ಮನದಲಿ ಪಾಡುತ ಹರುಷದಲಿ ।
ಮೂಡಲಗಿರಿಯ ಅನಂತ ಭಕುತರಿಗೆ ।
ಬೇಡಿದಭೀಷ್ಟೆಯ ನೀಡುವ ವೆಂಕಟನಾ ॥ ಪ ॥

ಜಗವಡಿಯ ಹರಿಯೆ ಈತನೇ । ಜಗದಾಧಾರವಯ್ಯ ।
ಜಗದರೂಪಿನಲಿ ಜಗದೊಳು ವ್ಯಾಪಿಸಿ ।
ಜಗದ್ಭಿನ್ನ ಮೂಜಗವ ಪೊರೆವನೀತ ॥ ೧ ॥

ಮೂಲ ನಾರಾಯಣನ ಜಗದಿ ಸು । ಲೀಲೆ ಮಾಡುವವನಾ ।
ಕಾಲಕಾಲದಿ ಸುಶೀಲಜನರ ।
ಹೃದಯದಿ ನಿಂತು ಪಾಲಿಸುತಿಹನಾ ॥ ೨ ॥

ಅನ್ಯ ವಿಷಯಗಳನಾ ಕನಸಿಲಿ । ಕಣ್ಣೆತ್ತಿ ನೋಡದಲೇ ।
ಚಿನ್ಮಯ ಮೂರುತಿ ತನ್ನನ್ನೆ ಭಜಿಸಲು ।
ಬೆನ್ನು ಬಿಡದಲಿಹ ಘನ್ನಮಹಿಮನಾ ॥ ೩ ॥

ತಂದಿ ತಾಯಿ ಈತ ಭ್ರಾತೃ । ಬಂಧು ಬಳಗದಾತ ।
ಹಿಂದಿನ ಜನುಮದ ಪುಣ್ಯದ ಫಲದಿ ಗೋ ।
ವಿಂದನ ಚರಣಾರವಿಂದವ ಕಂಡೆ ॥ ೪ ॥

ವಾಸುದೇವ ಯನ್ನ ಹೃದಯದಿ ವಾಸವಾಂತನ್ನ ।
ದಾಸನೆನಸಿ ಸಂತೋಷದಿ ಕರತಂದ ।
ಭೂಸುರ ಪ್ರೀಯ್ಯ ಗುರುಶ್ರೀಶವಿಠಲನಾ ॥ ೫ ॥

**ಉಗಾಭೋಗ : ೦೧** **ರಾಗ : , ತಾಳ :**

ಶ್ರೀಲಕುಮಿಸರಸಿಜ ಭವೇಂದ್ರ ಪೂಜಿತ ಚರಣ ।
ಕಾಲಕಾಲಕೆ ನೆನವರಭೀಷ್ಟ ಸಲಿಸುವ ಚರಣ ಬಹು ।
ಖೂಳಜನರಿಗೆ ಅತಿ ಭಯಂಕರವಾಗಿ ತೋರುವ ಚರಣ ವನ ।
ಮಾಲೆಯಂದದಲಿ ಈ ದಿವ್ಯಚರಣಸ್ಮರಣೆ ಯೆನಗಿತ್ತು ।
ಪಾಲಿಸಿ ರಕ್ಷಿಸೈ ಗುರುಶ್ರೀಶವಿಟ್ಠಲ ಪ್ರಭೋ ॥

**ಉಗಾಭೋಗ : ೦೨** **ರಾಗ : , ತಾಳ :**

ದಾತನು ಯನಗೆ ನೀನು ಶ್ರೀಹರಿ ನಿನಗೆ ದೂತನು ನಾನು ಬಹು ।
ಮಾತಗಳಾಡಲ್ಯಾಕೆ ಭವಭೀತಿಗೆಂದಿಗಂಜೆ ಪರ ।
ಮಾತುಮಾ ನಿನ್ನ ಪಾದ ಬಹು ಪ್ರೀತಿಯಿಂದಲಿ ನೆನೆಯುವರ ।
ವಾತಮತದುತ್ತಮರ ಸೇವಿಯೊಳಿಟ್ಟು ಪೋಷಿಸೈ ಗುರುಶ್ರೀಶವಿಟ್ಠಲಪ್ರಭೋ ॥

**ಉಗಾಭೋಗ : ೦೩** **ರಾಗ : , ತಾಳ :**

ಶ್ರೀಹರಿ ನಿನ್ನದಾಸರ ಮಹಿಮೆ ಗುರುಹಿರಿಯರು ಬಲ್ಲರಲ್ಲದಲೆ ।
ನರಾಧಮರಾದ ನರಿನಾಯಿಗಳೇನು ಬಲ್ಲರೈ ।
ದರ್ಶನಮಾತ್ರದಿಂದ ದುರಿತಗಳನ್ನು ದೂರಮಾಡಿ ।
ಪರಲೋಕಮಾರ್ಗ ತೋರ್ಪರೈ ಗುರುಶ್ರೀಶವಿಟ್ಠಲ ಪ್ರಭೋ ॥

**ಉಗಾಭೋಗ : ೦೪** **ರಾಗ : – , ತಾಳ : –**

ವಬ್ಬನ ಬೇಡಲ್ಯಾಕೆ ಮತ್ತೊಬ್ಬನ ಆಡಲ್ಯಾಕ ವೈದರ್ಭಿರಮಣಾ ಕರು ।
ಣಾಬ್ಧಿ ಜಗದೊಡೆಯಾ ಶ್ರೀಹರಿ ನಿನಗೆ ನಾನೊಬ್ಬನೇ ಭಾರವೆ ॥
ಕಬ್ಬುಬಿಲ್ಲನೈಯ್ಯ ನಿನ್ನ ಮನವುಬ್ಬಿ ತುತಿಪರಲಿ ಸ ।
ದ್ಭಕ್ತಿಯಿತ್ತು ಪಾಲಿಪಾಲಿಸಿ ರಕ್ಷಿಸೈ ಗುರುಶ್ರೀಶವಿಟ್ಠಲ ಪ್ರಭೋ ॥

**ಉಗಾಭೋಗ : ೦೫** **ರಾಗ : – , ತಾಳ : –**

ಹರಿ ನಿನ್ನ ದಾಸರಭಾಗ್ಯಕ್ಕೆ ಸರಿಯಾವದೋ ಮೂರುಲೋಕದೋಳ್ ।
ಫಲವೇನು ಅವರಿಗೆ ಎರಡೆರಡುಳದು ಸಿರಿಯು ಮತ್ತೆ ।
ಎರಡೆರಡುವಿಧ ಪುರುಷಾರ್ಥ ಸ್ಮರಿಸಿರೈ ಗುರುಶ್ರೀಶವಿಟ್ಠಲ ಪ್ರಭೋ ॥

## ಉಗಾಭೋಗ : ೦೬ ರಾಗ : – , ತಾಳ : –

ಶ್ರೀಶನಂಘ್ರಿಗಳ ನೀ ಬ್ಯಾಸರದಲೆ ಸ್ಮರಿಸು ।
ಈಷಣತ್ರಯಗಳ ಆಶೆ ಬ್ಯಾಗನೆ ಬಿಡು ।
ಹೇಸಿ ವಿಷಯದ ಸುಖ ಲೇಸೆಂದು ತಿಳಿಯದಿರು ।
ಕಾಸು ಬಾಳದ ಸಂಸಾರದೊಳು ತೊಳಲದಿರು ।
ಲೇಶ ಭಯ ನಿನಗಿಲ್ಲ ವಾಸುದೇವನ ನಂಬು ।
ಭೂಷಣವು ನಿನಗೆ ವೈರಾಗ್ಯ ಭಾಗ್ಯವು ಫಳಿಸು ।
ಶೇಶಗಿರಿಯವಾಸ ಗುರುಶ್ರೀಶವಿಟ್ಠಲರೇಯ ।
ದಾಸಾನುದಾಸರ ದಾಸನೆಂದೆನಿಸೊ ॥

## ಸುಳಾದಿ : ೦೧ ರಾಗ : – , ಧ್ರುವತಾಳ

ಶ್ರೀನಿವಾಸನೆ ನಿನಗೇನು ಬಿನ್ನೈಸಲೋ ।
ಧೇನಿಸಿದರೆ ಯನಗಾಶ್ಚರ್ಯ ತೋರುತಿದೆ ।
ಅನಾದಿಕಾಲದಿಂದ ಸೃಷ್ಟ್ಯಾದಿ ವ್ಯಾಪಾರ ।
ನೀನೆ ಮಾಡಿಸುವೆಂದು ಶಾಸ್ತ್ರ ಸಿದ್ಧ ।
ಜ್ಞಾನಿಗಳು ಹೀಗೆ ತಿಳಿದು ಪೇಳುವರಯ್ಯಾ ।
ಈ ನೀತಿ ನೋಡಿದರೆ ಪುಶಿಗಾಣದು ।
ಹೀನ ಜ್ಞಾನಗಳಿಂದನೇಕ ಭವಣಿಬಡುತ ।
ನಾನಾ ಯೋನಿಗಳಲ್ಲಿ ಸಂಚರಿಸುವ ।
ಈ ನಡತೆಯ ನೋಡೆದಾರಿಂದಲಾಗುವದು ।
ಶ್ರೀನಾಥ ನೀನೆ ದಯದಿ ತಿಳಿಸಬೇಕು ।
ತಾನೆಮಾಡುವ ಜೀವನೆಂದು ಯೋಚನೆಮಾಡೆ ।
ಅನಾದಿಯಿಂದ ಶಕ್ತಿ ಶೂನ್ಯ ಅಲ್ಪ ।
ಕಾಣ ತನ್ನ ಸ್ವರೂಪ ಯಿನ್ನಾವದು ಬಲ್ಲನೊ ।
ಜ್ಞಾನಪೂರ್ಣ ಸರ್ವಜ್ಞ ನೀನೆನರಿಯಾ ।
ಜ್ಞಾನ ಕರ್ಮೇಂದ್ರಿ ಮೊದಲಾದ ತತ್ವಗಳನ್ನೆ ।
ಮಾನಿಗಳಿವಕೆ ಬ್ರಹ್ಮ ರುದ್ರೇಂದ್ರರೂ ।
ನಾನಾ ವ್ಯಾಪಾರವ ಮಾಡಿಸಿ ಇವರಿಂಥ ।
ಹೀನ ಸುಖವು ಉಣಿಸುವರೆಂಬೆನೇ ।
ಜ್ಞಾನಿಗಳರಸೇ ನಿನ್ನಾಜ್ಞಧಾರಕರವ ।
ರೇನು ಮಾಡುವದೆಲ್ಲ ನಿನ್ನ ಸೇವೆ ।

ಜಾನಕಿಪತಿಯೆ ತ್ರಿಗುಣ ಕಾರ್ಯವೆನಲಿಬೇಕು ।
ಶ್ರೀನಾರಿ ಯಿವಕಭಿಮಾನಿ ಸ್ವಾಮೀ ।
ನೀನೆ ಸರ್ವರಿಗೆ ನಿಯಾಮಕನಾಗಿ ಇದ್ದು ।
ಅನೇಕ ವಿಹಾರ ಮಾಡುತಿಪ್ಪೆ ।
ನಾನು ನನ್ನದು ಯೆಂಬೋದೆಲ್ಲಿಂದ ಪುಟ್ಟಿತಯ್ಯಾ ।
ಈ ನುಡಿ ಬಿಡಿಸಿ ಕಾವೋರನ್ನ ತೋರೋ ।
ದೀನವತ್ಸಲ ಗುರುಶ್ರೀಶವಿಟ್ಠಲ ನಿನ್ನಾ ।
ಧೀನದವನೊ ನಾನು ಆನಂದ ಮೂರುತಿಯೆ ॥ ೧ ॥

**ಮಟ್ಟತಾಳ :**

ಇಂದಿರೇಶನೆ ನಿನ್ನಾನಂದ ಮೂರುತಿಗಳು ।
ವಂದರಲ್ಲಿ ಬಿಡದೆ ಸಂದಣಿಸಿಗವಯ್ಯಾ ।
ವಂದಾದರು ಕೃತ್ಯದರಿಂದಲಾಗದು ಥೊರಿಯೆ ।
ಮಂದರೋದ್ಧರ ನಿನ್ನ ಬಂಧಕ ಶಕುತಿಗೆ ।
ವಂದಿಪೆ ಮೂಜಗದ ತಂದೆ ನಿನ್ನಯ ಪಾದ ।
ದ್ವಂದದಿ ಎನ್ನ ಮನಸು ಪೊಂದಿಸೊ ಕ್ಷಣ ಬಿಡದೆ ।
ನಂದ ನಂದನನೆ ಎನ್ನಿಂದಲಾಗುವ ದೋಷ ।
ವಂದು ನೋಡದೆ ದಯಾಸಿಂಧು ಯನ್ನ ಹೃದಯ ।
ಮಂದಿರದಲಿ ನಿಂತು ಸುಂದರಮೂರುತಿಯೆ ಗುರುಶ್ರೀಶವಿಟ್ಠಲ ।
ಸಂದರುಶನವೀಯೊ ಸರ್ವಸ್ಥಳಗಳಲಿ ॥ ೨ ॥

**ಮಟ್ಟತಾಳ :**

ಶ್ರೀಶಾಸ್ವಾತಂತ್ರ ನೀನೇಸು ಬಗೆಯಲಿ ನೋಡೆ ।
ಸಾಸಿವಿಗಾಳಿನಿತು ಸಂಶಯವಿಲ್ಲ ।
ಲೇಸೆ ಎನಗೆ ನೀನು ಯೇಸು ಜನ್ಮಗಳೀಯ್ಯಾ ।
ಈಶಾ ಎಂದಿಗೂ ನೀನು ದಾಸ ನಾನೂ ।
ಸುಜ್ಞಾನವೆ ಕೊಟ್ಟು ನೀ ಸಲಹಲಿ ಬೇಕು ।
ವಾಸುದೇವನೆ ಭಕ್ತ ಪೋಷಕನೆ ।
ಭಾಸುರಮೂರುತಿ ಈ ಸಚರಾಚರ ।
ವಾಸ ಸರ್ವದ ಎನ್ನ ಮನಸಿನಲ್ಲೀ ।
ಬೇಸರದಲೆ ನೀ ಪ್ರಕಾಶನಾಗಿ ವಿಷಯ ।
ದಾಸಿ ಬಿಡಿಸೊ ಗುರುಶ್ರೀಶವಿಟ್ಠಲಾ ॥ ೩ ॥

**ಅಟ್ಟತಾಳ :**

ಕಂತುಪಿತನೆ ನಿನ್ನಚಿಂತ್ಯಾದ್ಭುತ ಶಕ್ತಿ ।
ಅಂತುಗಾಣಳೊ ರಮೆ ಎಂತು ಬಲ್ಲೆನೊ ನಾನು ।
ಜಂತುಗಳೊಳು ನೀಚ ಇಂಥ ಅಲ್ಪನ ಮನ ।
ನಿಂತಲ್ಲಿ ನಿಲಿಸದೆ ಭ್ರಾಂತನ್ನ ಮಾಡೆನ್ನೈ ।
ನಂತೆ ನೋಡುವರ ಮಹಂತರೊಡಿಯ ಭಗ ।
ವಂತ ನಿನ್ನವರವನಂತ ತಿಳಿದು ಸ್ವಾಮಿ ।
ಸಂತತ ಹರಿ ನಿನ್ನ ಚಿಂತನೆ ಬಿಡೆನೆನ್ನ ।
ಅಂತರಂಗದೊಳಿಟ್ಟು ಸಂತರ ಸೇವಿಸಿ ।
ರಂತರ ಸೇವಿ ನಿರಂತರಯಿತ್ತು ಸ ।
ತ್ಪಂಥ ತೋರೆನ್ನ ಚಿಂತಿಯ ಬಿಡಿಸಯ್ಯಾ ।
ಸಂತೋಷಮೂರುತಿ ಗುರುಶ್ರೀಶವಿಟ್ಠಲ ।
ಇಂತು ಪಾಲಿಸೊ ಜಗದಂತರ್ಯಾಮಿ ॥ ೪ ॥

**ಆದಿತಾಳ :**

ನೀನೆ ಯೆನಗೆ ತಾಯಿ ನೀನೆ ಯೆನಗೆ ತಂದಿ ।
ನೀನೆ ಯೆನಗೆ ಬಂಧು ನೀನೆ ಯೆನಗೆ ಸಖಾ ।
ನೀನೆ ಯೆನಗೆ ವಿದ್ಯಾ ನೀನೆ ಯೆನಗೆ ದ್ರವ್ಯ ।
ನೀನೆ ಯೆನಗೆ ಧೊರಿ ನೀನೆ ಯೆನಗೆ ದಾತಾ ।
ನೀನೆ ಯೆನಗೆ ಸರ್ವ ಸಂಪತ್ತು ಕೃಷ್ಣಯ್ಯಾ ।
ನೀನೆ ಯೆನಗೆ ಗುರುಶ್ರೀಶವಿಟ್ಠಲರೇಯ ।
ನೀನೆ ಸ್ವಾಮಿ ಸರ್ವಾಭಿಷ್ಟದಾಯಕನೋ ॥ ೫ ॥

**ಜತೆ :**

ಈರೇಳು ಲೋಕಕ್ಕೆ ಕಾರಣ ನೀನಯ್ಯಾ ।
ಪಾರುಗಾಣಿಸೊ ಎನ್ನ ಗುರುಶ್ರೀಶವಿಟ್ಠಲ ॥ ೬ ॥

**ಸುಳಾದಿ : ೦೨** **ರಾಗ : ನಾಟಿ , ಧ್ರುವತಾಳ**

ಶ್ರೀನಿವಾಸನೆ ಪೂರ್ಣ ಜ್ಞಾನನೆಂದೆನೆ ಸ್ವಾಮಿ ।
ದೀನವತ್ಸಲ ಕರುಣಿ ಜ್ಞಾನಿಗಳರಸನೆ ।
ಭಾನುಕೋಟಿತೇಜ ಜ್ಞಾನಗಮ್ಯ ಯೆನ್ನ ।

ಹೀನಮತಿಯ ಬಿಡಿಸಿ ಕಾಯೊ ಕೃಷ್ಣ ।
ಅನಾದಿಕಾಲದಿಂದ ನಾನು ನಿನ್ನವರವ ।
ನೀನೆನರಿಯೆ ಜಗದಂತರ್ಯಾಮಿ ।
ಯೇನು ಮಾಡುವದೆಲ್ಲ ಹೊರ ವಳಗೆ ನಿಂತು ।
ನೀನೆ ಮಾಡಿಸುತಿಪ್ಪೆ ತಿಳಿಸದಲೆ ।
ನಾನು ನನದು ಯೆಂಬೊ ಹೀನ ಜ್ಞಾನ ಪುಟ್ಟಿಸಿ ।
ಕಾಣಿಸಿಕೊಳುವಲ್ಲಿ ಜಾಣತನದಿ ।
ಕಾಣದ ಕುರುಡಗೆ ಕನ್ನಡಿ ಕೊಟ್ಟಂತೆ ।
ನಾನಾ ಶಾಸ್ತ್ರವು ವೋದಿ ಪೇಳಲೇನು ।
ನೀನು ನಿನ್ನವರಿಂದ ಕೂಡಿಮಾಡುವ ಚೇಷ್ಟೆ ।
ತಾನರಿಯದ ಮನುಜ ಜ್ಞಾನಿಯೇನೋ ।
ಜ್ಞಾನಿಗಳು ಹಿಂದೆ ಕೇಳಿಕೊಂಡಂತೆ ಸ್ವಾಮಿ ।
ಆ ನುಡಿಗಳಲ್ಲಿ ದೃಷ್ಟಿಯಿಟ್ಟೊ ।
ನಾನು ಕೇಳಿದಂತೆ ತರತಮ ಪಂಚಭೇದ ।
ಜ್ಞಾನ ಪುಟ್ಟಿಸಿ ನಿನ್ನ ಮೂರ್ತಿಗಳ ।
ಧ್ಯಾನವ ಮಾಡಿಸೊ ಅನುದಿನ ತಪ್ಪದಲೆ ।
ಶ್ರೀನಾಥ ಯೆನ್ನ ಹೃದ್ಗುಹ ನಿವಾಸೀ ।
ದಾನವಾಂತಕ ಗುರುಶ್ರೀಶವಿಟ್ಠಲರೇಯಾ ।
ದೀನರಕ್ಷಕನೆಂಬ ಬಿರಿದು ತೋರೊ ॥ ೧ ॥

**ಮಟ್ಟತಾಳ :**

ಪದುಮನಾಭನೆ ಯೆನ್ನ ಮದಡ ಬುದ್ಧಿಯ ನೋಡಿ ।
ಗದಗದ ನಡಗುವೆನೊ ಹೃದಯದೊಳಗೆ ನಿನ್ನ ।
ಪದಗಳ ಪೂಜಿಸದೆ ಅಧಮ ಕರ್ಮಗಳಲ್ಲಿ ।
ವದಗಿ ಪೋಗುವದಯ್ಯಾ ಬುಧರ ಸಂಗದಲ್ಲಿದ್ದು ।
ಮುದದಿಂದ ನಿನ್ನ ಮಹಿಮೆ ವದನದಲಿ ಪೊಗಳದಲೆ ।
ಮದಮತ್ಸರವಿಡಿದು ಕದುವದು ಸುಗುಣಗಳ ।
ವಿಧಿಪಿತ ನಿನ್ನನಗಲಿ ಸುಖವ ಕಾಣೆನೊ ಪದೋ ।
ಪದಿಗೆ ನಿನ್ನಯ ಸ್ಮರಣೆ ವೊದಗಿಸೊ ನರಹರಿ ।
ಮದನಜನಕ ಭವದ ಉದಧಿ ದಾಟಿಸೊ ತಂದೆ ।
ಉದಭವಿಸಲಾರೇ ನಾನಾ ಯೋನಿಗಳಲ್ಲಿ ।
ವದಗಿ ಪಾಲಿಸೋ ಈಶ ಗುರುಶ್ರೀಶವಿಟ್ಠಲ ॥ ೨ ॥

**ತ್ರಿವಿಡಿತಾಳ :**

ದಾಸನೆನಿಸಿದೆ ಅಭಾಸಕ ನಾನಾಗೀ ।
ಹೇಸಿಕಿ ಮಾರ್ಗವ ಆಚರಿಸೀ ।
ಕಾಸುವೀಸದ ಲಾಭಗೋಸುಗ ತಿರುಗಿದೆ ।
ದೇಶದೇಶಂಗಳ ಹೇಸಿಕಿ ಜನರಲ್ಲಿ ।
ಆ ಸುಜನರು ನುಡಿದ ದಿವ್ಯವುಕ್ತಿಗಳನ್ನು ।
ಸಾಸಿವಿಕಾಳಷ್ಟು ತಿಳಿಯದಲೇ ।
ಕಾಸಿಗೆ ಬಾರದ ಕಥೆಗಳನ್ನೆ ಪೇಳಿ ।
ಲೇಸಾಗಿ ಪೊಟ್ಟಿಯ ಪೊರದೆನಯ್ಯಾ ।
ಶ್ರೀಶ ನಿನ್ನಯ ಪಾದ ಧ್ಯಾಸದಲ್ಲಿದ್ದು ವಿ ।
ಶ್ವಾಸ ಸಜ್ಜನರಲ್ಲಿ ಮಾಡಲಿಲ್ಲ ।
ಈಸು ಬಗೆಯಲಿ ನರದಾಸನಾಗಿ ಹರಿ ।
ದಾಸನೆಂದೆನಿಸಿದೇ ಬಾಹೀರದಿ ।
ಶ್ರೀಶ ನಿನ್ನಯ ನಿಜ ದಾಸರಂತೆ ತೋರಿ ।
ಮೋಸಗೊಳಿಸುವೆನೊ ಅಲ್ಪಜ್ಞರ ।
ಈಸಪರಾಧವ ನೀನೆಣಿಸದೆ ಗುರು ।
ಶ್ರೀಶವಿಟ್ಠಲನೆ ಉದ್ಧಾರ ಮಾಡೋ ॥ ೩ ॥

**ಅಟ್ಟತಾಳ :**

ತಾಮಸ ಜನರೊಳು ಪಾಮರ ನಾನಾಗಿ ।
ನೇಮ ನಿತ್ಯಗಳೆಲ್ಲ ನಾಮರೆದೆನೋ ರಂಗ ।
ಭ್ರಾಮಕತನದಿಂದ ಸತಿಸುತರಲಿ ಸ್ನೇಹ ।
ನಾ ಮಾಡುವೆನೊ ನಿನ್ನ ಲೀಲೆಯ ತಿಳಿಯದೆ ।
ಈ ಮಹಾ ದುರ್ಮತಿ ಹೇಗೆ ಬಿಡುವದೈಯ್ಯಾ ।
ನಾಮಸುಧಿಯ ಪಾನವ ಮಾಳ್ಪರಲ್ಲಿಟ್ಟು ।
ಮಾಮನೋಹರ ಗುರುಶ್ರೀಶವಿಟ್ಠಲ ನಿನ್ನ ।
ನಾಮವ ನುಡಿಸೈಯ್ಯಾ ದಿವ್ಯ ಜ್ಞಾನವನಿತ್ತು ॥ ೪ ॥

**ಆದಿತಾಳ :**

ನಿನ್ನ ಮೂರುತಿ ತೋರೊ ಕಣ್ಣುಗಳಿಗೆ ।
ನಿನ್ನ ಕಥೆ ಎನ್ನ ಕಿವಿಗಾಗಲೊ ಸ್ವಾಮಿ ।

ನಿನ್ನ ಮಂಗಳ ಗುಣ ಪೊಗಳಲೊ ಜಿಹ್ವೆ ।
ನಿನ್ನವರಂಗಸಂಗ ತ್ವಗೇಂದ್ರಿಗೆ ।
ನಿನ್ನಾಲೋಚನೆ ಮನದೊಳಗಿರಿಸಯ್ಯಾ ।
ನಿನ್ನ ನೋಡಿ ನಿನ್ನನೆ ಪಾಡಿಸೋ ।
ನಿನ್ನಾನಂದವೆ ತುಂಬಿ ತುಳಕಲಯ್ಯಾ ।
ಇನ್ನೊಂದು ಬಯಕೆನಗಿಲ್ಲ ಶ್ರೀಹರಿ ।
ಮನ್ನಿಸಬೇಕು ಗುರುಶ್ರೀಶವಿಟ್ಠಲ ।
ಪನ್ನಗಾಚನ ಶ್ರೀವೆಂಕಟೇಶ ॥ ೫ ॥

**ಜತೆ :**

ಅನ್ಯ ವಿಷಯದಾಸೆಯನ್ನೆ ಬಿಡಿಸಿ ಭಕ್ತಿ ।
ನಿನ್ನಲ್ಲಿ ಕೊಡು ಸ್ವಾಮಿ ಗುರುಶ್ರೀಶವಿಟ್ಠಲ ॥ ೬ ॥

**ಸುಳಾದಿ : ೦೩** **ರಾಗ : – , ಧ್ರುವತಾಳ**

ಮನವೆ ಮರಿಯದಿರು ವನಜನಾಭನ ನಾಮ ।
ದಿನ ದಿನಕಾನಂದ ಅತಿಶಯವೊ ।
ಬಿನಗು ಚಿಂತೆಗಳಿಂದ ಫಲವು ಎಳ್ಳಿನಿತಿಲ್ಲ ।
ಗುಣವಂತನಾಗಿ ಹರಿಯ ಕೊಂಡಾಡೆಲೊ ।
ಬಿನಗು ಜನರಕೂಡ ದಿನವು ಕಳಿಯದೆ ಸ ।
ಜ್ಜನರ ಸೇವಿಸು ಅತಿ ಭಕುತಿಯಿಂದ ।
ಗುಣಪೂರ್ಣ ಗುರುಶ್ರೀಶವಿಟ್ಠಲನ್ನ ।
ತನ್ನ ನಂಬಿದ ಜನರ ಕೈಬಿಡದೆ ಪೋಷಿಸುತಿಪ್ಪನೊ ॥ ೧ ॥

**ಮಟ್ಟತಾಳ :**

ನಿತ್ಯದಲಿ ಹರಿಯ ಉತ್ತಮಗುಣ ತಿಳಿದು ।
ಹೊತ್ತು ಹೊತ್ತಿಗೆ ಏಕಚಿತ್ತದಿ ಸ್ಮರಿಸದೆ ।
ಮತ್ತಾರ ಬಳಿವಿಡಿದು ಮತ್ತೆ ಸತಿಸುತರ ।
ಹತ್ತಿ ಹೊಂದಿದವರ ಭೃತ್ಯನು ತಾನಾಗಿ ।
ಎತ್ತ ನೋಡಿದರತ್ತ ವಿತ್ತಗೋಸುಗವಾಗಿ ।
ಉತ್ತಮಧಮರೆನದೆ ಸುತ್ತತ ಮನೆಗಳಲ್ಲಿ ।
ಹೆತ್ತ ತಂದಿಯ ಗಂಟು ಯಿತ್ತ ಪುರುಷನಂತೆ ।
ಶಕ್ತಿ ಯುಕ್ತಿಗಳಿಂದ ಎತ್ತಿ ಧನವ ಯಾಚಕ ।

ವೃತ್ತಿಮಾಡಿ ತಂದು ಉತ್ತಮರಿಗೆ ವಂದು ।
ತುತ್ತು ಅನ್ನವ ಕೊಡದೆ ಹತ್ತಿಲೆ ಬಚ್ಚಿಟ್ಟು ।
ಹೊತ್ತುಗಳದವರನ್ನು ಉತ್ತಮರಾದವರು ।
ಹತ್ತಿ ಸೇರಗೊಡರೊ ಚಿತ್ತಜಪಿತ ಕಾಣೊ ।
ಎತ್ತಿ ನೋಡನು ವಮ್ಮೆ ಉತ್ತಮ ಗುಣನಿಧೆ ಗುರುಶ್ರೀಶವಿಟ್ಠಲನ್ನ ।
ಭೃತ್ಯರಾದವರಿಗೆ ನಿತ್ಯ ಸುಖವು ಕಾಣೊ ॥ ೨ ॥

**ತ್ರಿವಿಡಿತಾಳ :**

ಎಷ್ಟು ಪೇಳಿದರೊಂದೆ ಗುಟ್ಟು ತಿಳಿಯೊ ಸಿರಿ ।
ಕೃಷ್ಣನ್ನ ಮರಿಯದೆ ಘಟ್ಯಾಗಿ ನೆರೆನಂಬೊ ।
ಯಿಷ್ಟವು ಪ್ರಾಪ್ತಿ ಅನಿಷ್ಟವು ಪರಿಹಾರ ।
ಪುಟ್ಟುವದೊ ಸುಖ ಅಷ್ಟು ಯಿಷ್ಟೆನ್ನದೆ ।
ಕೊಟ್ಟ ವಿಷಯಲ್ಲೆ ಥಟ್ಟಾರೆ ಧ್ಯಾಸವು ।
ಪುಟ್ಟಿಸುವದು ಕಾಮ ಕ್ರೋಧಾದಿಗಳ ।
ನಷ್ಟವಾಗಿ ಕೃತಿ ಕೆಟ್ಟು ಪೋಪದು ಬುದ್ಧಿ ।
ಭ್ರಷ್ಟನೆನಿಸೊ ವಿಶಿಷ್ಟರಿಂದ ।
ಇಷ್ಟೆಮಾತ್ರವು ಅಲ್ಲ ಕಟೀ ಯಮನು ತನ್ನ ।
ಪಟ್ಟಣದೊಳಗಿಟ್ಟು ಕಷ್ಟವ ಬಡಿಸುವರು ।
ಪುಟ್ಟುವಿ ನೀಚರ ಹೊಟ್ಟಿಲಿ ಮತ್ತೆ ಮತ್ತೆ ।
ಕಟ್ಟಕಡಿಗಿ ಭವದ ಕಟ್ಟು ಬಿಡದೊ ।
ಥಟ್ಟನೆ ಗುರುಶ್ರೀಶವಿಟ್ಠಲನ ನಂಬೊ ।
ಬಿಟ್ಟಗಲನೊ ತನ್ನ ಸಾಕುವ ಇಹಪರದಿ ॥ ೩ ॥

**ಅಟ್ಟತಾಳ :**

ಹೆಂಡರು ಮಕ್ಕಳು ಹರಿಗೆ ತೋಂಡರು ಎಂದು ।
ಉಂಡದ್ದು ಉಟ್ಟದ್ದು ಅರ್ಪಿಸು ಆತಗೆ ।
ಕೊಂಡದ್ದು ಕೊಟ್ಟದ್ದು ಬಡದಾಡುವದೆಲ್ಲ ।
ಥಂಡಥಂಡದಿ ನೀನು ಕಂಡದ್ದು ಕೇಳಿದ್ದು ।
ಪಾಂಡುರಂಗನ ಸೇವೆಯೆಂದು ತಿಳಿದು ನಿತ್ಯ ।
ಕೊಂಡಾಡು ಬಿಡದೆ ಭೂಮಂಡಲಾಧಿಪ ನಾನೀ ।
ಕಂಡದ್ದು ಹಂಬಲಿಸು ಪುಂಡರಿಕಾಕ್ಷ ಶ್ರೀಗುರುಶ್ರೀಶವಿಟ್ಠಲ ಅ ।
ಖಂಡ ಭಾಗ್ಯವನೀವ ತೋಂಡವತ್ಸಲನೊ ॥ ೪ ॥

**ಆದಿತಾಳ :**

ರಂಗನ ನಾಲಿಗೆಯಿಂದ ಶೃಂಗಾರದಲಿ ಪಾಡೊ ।
ಕಂಗಳಿಂದಲಿ ನೋಡೊ ಮಂಗಳಾಂಗನ ರೂಪ ।
ಅಂಗಕ್ಕೆ ಸಜ್ಜನರ ಅಂಗಸಂಗವ ಮಾಡೊ ।
ಡಂಗುರ ಹೊಯ್ಯೊ ಪಾಂಡುರಂಗ ಸರ್ವೇಶನೆಂದು ।
ಗಂಗಾಜನಕನ ಗುಣಗಣಂಗಳ ಕೇಳೊ ಅಂತ ।
ರಂಗದಿಪಾಡಿ ದಯಾಪಾಂಗನ ಕರುಣವ ।
ಮಂಗಳಪ್ರದ ಗುರುಶ್ರೀಶವಿಟ್ಠಲ ತನ್ನ ।
ಹಿಂಗದೆ ಭಜಿಸೆ ಸುಖಂಗಳ ಕೊಡುವನೊ ॥ ೫ ॥

**ಜತೆ :**

ಅರಲವ ಮರಿಯದೆ ಗುರುಶ್ರೀಶವಿಟ್ಠಲನ್ನ ।
ಚರಣವು ಸ್ಮರಿಸಲು ಪರಮ ಪದವಿಯನೀವಾ ॥ ೬ ॥

**ಸುಳಾದಿ : ೦೪ ರಾಗ : – , ಧ್ರುವತಾಳ**

ನಮೊ ನಮೊ ಶ್ರೀಹರಿಯೆ ನಮೊ ನಮೊ ಎನ್ನ ಧೊರಿಯೆ ।
ನಮೊ ನಮೊ ಎಂಬೆ ನಿನಗೆ ಸುಮನಸರೊಡಿಯನೆ ನಿನ್ನ ।
ಸಮರೆನಿಪರಿಲ್ಲ ರಮೆ ಮೊದಲಾದ ಸರ್ವ ಸುರರೊಳಗೆ ।
ಅಮಿತ ಜೀವರೊಳಗೆ ಅಧಮಾಧಮನು ನಾನು ।
ನಿಮಿಷವಾದರು ನಿನ್ನ ಸ್ಮರಿಸಲಿಲ್ಲ ।
ಸುಮತಿಗಳನು ಬಿಟ್ಟು ಕುಮತಿಗಳನು ಕೂಡ್ದೆ ।
ಮಮತೆ ವಿಷಯದಲ್ಲಿ ಘನವಾಯಿತೊ ।
ಮಮಕುಲ ದೈವವೆ ಸುಮುಖವಾಗಲಿಬೇಕೊ ।
ವಿಮುಖವಾದರೆ ಯನಗಿನ್ನಾವ ಗತಿಯೊ ।
ಸಮಯ ಇದೆ ನರಜನ್ಮ ಬಂದಾಗಲೆ ಪೊರಿಯಯ್ಯಾ ಅಂದು ।
ಕ್ರಿಮಿಕೀಟ ಜನುಮದಲ್ಲಾವ ಸಾಧನವೊ ।
ರಮೆಯರಸನೆ ಗುರುಶ್ರೀಶವಿಟ್ಠಲ ನಿನ್ನ ।
ಮಮತೆ ವಂದಿರೆ ನಾನು ವಂದು ಬೇಡುವದಿಲ್ಲ ॥ ೧ ॥

**ಮಟ್ಟತಾಳ :**

ನಿನ್ನ ಧ್ಯಾನವ ಕೊಡೊ ಯನ್ನ ಧನ್ಯನ ಮಾಡೊ ।
ನಿನ್ನ ಮಂಗಳ ಗುಣವನ್ನೆ ಕೀರ್ತನೆಗೈಸೊ ।

ನಿನ್ನ ಕಥಾಮೃತವನ್ನೆ ಕುಡಿಸೊ ನಿತ್ಯ ।
ನಿನ್ನವರ ಸಂಗ ಜನ್ಮ ಜನ್ಮದಲಿರೆ ।
ಅನ್ಯ ವಿಷಯದಲ್ಲಿ ಇನ್ನು ಇಡಿಸದಿರೊ ।
ನಿನ್ನ ಭಕ್ತರಂತೆ ಯನ್ನ ಯೋಗ್ಯತೆ ಅಲ್ಲ ।
ಇನ್ನೇನಾದರೂ ಘನ್ನ ಜ್ಞಾನಿಗಳವರು ।
ನಿನ್ನ ಚರಣಕಮಲವನ್ನು ಬಿಡುವರಲ್ಲ ।
ಯನ್ನಯ ಗತಿಗಳು ಯಿನ್ನೆಷ್ಟು ಪೇಳಲಿ ।
ಯನ್ನಯ ತಪ್ಪುಗಳು ಅನಂತವಿದ್ದರು ।
ಅನ್ಯರ ದುರ್ಗುಣವನ್ನೆ ಯೆಣಿಸಿ ಯೆಣಿಸಿ ।
ಯನ್ನ ದಣಿಸುವದ್ಯೆಯ್ಯಾ ।
ನಿನ್ನ ಕಡೆಗೆ ಮನ ವಮ್ಮೆ ಪೋಗದು ಕೃಷ್ಣ ।
ಯನ್ನ ಬಾಳು ಸ್ವಾಮಿ ಯಿನ್ನು ಹೀಗಾಯಿತು ।
ಯಿನ್ನು ನಾ ಮೊರೆಯಿಟ್ಟೆ ಗುರುಶ್ರೀಶವಿಟ್ಠಲ ॥ ೨ ॥

## ತ್ರಿವಿಡಿತಾಳ :

ನೀನೇವೆ ಸರ್ವಜ್ಞ ನಾನು ಪೇಳುವದೇನು ।
ನೀನೇವೆ ಸ್ವಾತಂತ್ರ ಯೇನಾಯಿತೆನ್ನಿಂದ ।
ನೀನೇವೆ ಪ್ರೇರಿಸಿ ನುಡಿಸಿದ ಕಾರಣದಿ ।
ನಾನು ನುಡಿದೆನಯ್ಯಾ ಕರುಣಾನಿಧೆ ।
ನೀನೆ ಯನ್ನಯ ದೇಹದೊಳಗೆ ಹೊರಗೆ ಯಿದ್ದು ।
ನಾನಾ ವ್ಯಾಪಾರವ ಮಾಡಿಸುವಾಗಲೆ ।
ನಾನೆ ಮಾಡುವಿನೆಂಬ ಅಹಂಕಾರ ಬಿಡಿಸಿನ್ನು ।
ನೀನೆ ಮಾಡುವೆನೆಂಬ ಸ್ಮೃತಿಯನಿತ್ತು ।
ಶ್ರೀನಾಥ ದಯದಿಂದ ನಾನಾ ಠಾವಿನಲ್ಲಿ ।
ಯನಗೆ ನಿನ್ನಯ ರೂಪ ತೋರಿಸಯ್ಯಾ ।
ನಿನ್ನಯ ಸ್ಮೃತಿಯೆ ಭಾಗ್ಯ ವಿಸ್ಮೃತಿ ಯೆಂದಿಗೂ ಬೇಡ ।
ಮೀನಕೇತನಜನಕ ಗುರುಶ್ರೀಶವಿಟ್ಠಲ ।
ಸಾನುರಾಗದಿ ಕಾಯೊ ಶರಣೆಂಬೆ ನಿನಗೆ ॥ ೩ ॥

## ಅಟ್ಟತಾಳ :

ಇಂದಿರಾಪತಿ ನಿನ್ನ ಪೊಂದಿದವರ ಪಾದಾ ।
ಪೊಂದಿದವ ನಾನು ।

ತಂದೆ ನಿನ್ನಯ ಮನಸಿಗೆ ತಂದು ಪಾಲಿಸು ।
ಹಿಂದಿನ ಜನುಮದಿ ವಂದು ಸಾಧನ ಕಾಣೆ ।
ಇಂದಿನ ಜನುಮದಿ ಆದದ್ದು ಇಷ್ಟೆ ।
ಮುಂದೇನು ಮಾಡಿಪೆಯೊ ನೀನೆ ಬಲ್ಲಿ ।
ಮಂದಮತಿಗ ನಾನು ತಂದೆ ನಿನ್ನಯ ನಾಮಾ ಆ ।
ನಂದದಿಂದಲಿ ನುಡಿಸೊ ಇದನೆ ಬೇಡಿಕೊಂಬೆ ।
ಸಂದರ್ಶನ ಹೃದಯಮಂದಿರದಲ್ಲಿತ್ತು ।
ಪೊಂದಿಕೊಂಡಿರೊ ಗುರುಶ್ರೀಶವಿಟ್ಠಲಾ ॥ ೪ ॥

**ಆದಿತಾಳ :**

ಕೃಷ್ಣಾ ಯೆನ್ನೊಡಿಯನೆ ಸೃಷ್ಟಾದ್ಯಷ್ಟ ಕರ್ತೃ ।
ಪುಟ್ಟದೆ ನಾ ಮುನ್ನೆ ಪುಟ್ಟಿಸೆಂದೂ ।
ಬಟ್ಟಿನೆ ದೈನ್ಯವ ವಿಟ್ಠಲ ದಯದಿ ನೀ ।
ಪುಟ್ಟಿಸಿ ದೇಹವ ಕೊಟ್ಟು ರಕ್ಷಿಸಲಿಲ್ಲೆ ।
ಎಷ್ಟೆಷ್ಟು ದಿವಸಕ್ಕೆ ಅಷ್ಟಷ್ಟೆ ಸಾಧನ ಮಾಡಿಸಿ ।
ಶಿಷ್ಟರ ದಯ ಪುಟ್ಟುವಂತೆ ಮಾಡಿ ।
ಶಿಷ್ಟಾಶಿಷ್ಟ ನಿನ್ನ ನಾಮಾ ನಾಲಿಗೆಯಲ್ಲಿ ।
ಘಟ್ಯಾಗಿ ನಂಬದೆ ಭ್ರಷ್ಟ ಜ್ಞಾನವನ್ನು ।
ಕಟ್ಟಿಸಿಕೊಂಬೆನಯ್ಯಾ ಇಷ್ಟಮೂರುತಿ ದಯ ।
ವಿಟ್ಟು ಪೊರೆಯೊ ಗುರುಶ್ರೀಶವಿಟ್ಠಲಾ ॥ ೫ ॥

**ಜತೆ :**

ಪೊರೆವ ಧೊರೆಯು ನರಹರಿ ತಾ ಇರಲಾಗಿ ।
ಅರೆ ಮೊರೆಗೊಳಲೇಕೆ ಗುರುಶ್ರೀಶವಿಟ್ಠಲಾ ॥ ೫ ॥

**ಸುಳಾದಿ : ೦೫ ರಾಗ : – , ಧ್ರುವತಾಳ**

ಶ್ರೀಪತಿಯೆ ಎನ್ನ ಆಪನಿತು ನಾ ಬೇಡುವೆ ।
ನೀ ಪಾಲಿಸಬೇಕು ಎನ್ನ ಮಾತು ।
ಗೋಪಿಜನಜಾರ ಗೋಪಾಲ ಗೋವಿಂದ ।
ಗೋಪತಿ ಪೂಜ್ಯಪಾದ ಗೋಕುಲದರಸೆ ।
ಶ್ರೀಪುರುಷೋತ್ತಮ ಬೊಮ್ಮಾದಿ ತೃಣಾಂತ ।

ಆ ಪುರುಷರ ಪಾದಸ್ಮರಣೆಯನ್ನು ।
ಸ್ತ್ರೀಪುರುಷರ ತಾರತಮ್ಯ ತತ್ವೇಶರ ಸ್ವ ।
ರೂಪ ಸಾಂಶ ಅಂಶ ವಿಹೀನರ ।
ಈ ಪರಿ ದೇಹದಲ್ಲಿ ಪ್ರೇರಕರಾದವರ ।
ವ್ಯಾಪಕರಾಗಿ ನಿನ್ನ ಸೇವಿಪರ ।
ಪಾಪ ರಹಿತರಾಗಿ ಧರಿಯಲ್ಲಿ ಪುಟ್ಟಿ ಸ್ವ ।
ರೂಪ ವ್ಯಕ್ತ ಅವ್ಯಕ್ತರಾದವರ ।
ವ್ಯಾಪಕನಾದ ನಿನ್ನ ರೂಪ ತಿಳಿದು ಸರ್ವ ।
ದಾಪಾರ ಆನಂದದಿ ತುತಿಸುವರ ।
ಶ್ರೀಪರಮಾತ್ಮನೆ ಇಂತಿಪ್ಪ ಭಕುತರ ।
ನಾ ಪಾಡಿ ಪೊಗಳುವಂತೆ ಜ್ಞಾನವಿತ್ತು ।
ನೀ ಪೋಷಿಸಯ್ಯಾ ಅವರಲ್ಲಿ ನಿಂತು ಯನ್ನ ।
ಆಪಾರಾಂಬುಧಿ ಸಂಸಾರದಿಂದ ।
ನೀ ಪಾರುಮಾಡಿಸಿ ನಿನ್ನವರೊಳಗಿಟ್ಟು ।
ಭೂಪತಿ ನಿನ್ನ ದಿವ್ಯರೂಪ ತೋರೊ ।
ಉಪಾಯ ಕಾಣೆನೊ ಇವರ ಬಿಟ್ಟು ಯೇ ।
ಸುಪಾಯಮಾಡಿ ನೋಡೆ ಸುಜ್ಞಾನಕ್ಕೆ ।
ಆಪಗಾದಿ ತೀರ್ಥಸ್ನಾನ ಕ್ಷೇತ್ರಗಳ ಯಾತ್ರಿ ।
ಅಪರಿಮಿತ ಸತ್ಕರ್ಮಂಗಳು ।
ಸೋಪಾನವಿಲ್ಲದ ಗೋಪುರ ಏರಿದಂತೆ ।
ತಾ ಪರಿಹರಿಸುವವೆ ಜನ್ಮಗಳ ।
ವೀಪಗಮನ ಗುರುಶ್ರೀಶವಿಟ್ಠಲನೆ ಬಿ ।
ನ್ನಪ ಲಾಲಿಸು ಸುಜನ ಸಂಗವೀಯೊ ॥ ೧ ॥

**ಮಟ್ಟತಾಳ :**

ಹರಿದಾಸರ ಸ್ಮರಣಿ ದುರಿತವು ಪರಿಹಾರ ।
ದರುಶನವೇ ಸಕಲತೀರ್ಥಕ್ಷೇತ್ರ ಯಾತ್ರೆ ।
ವರಪಾದ ಪ್ರಕ್ಷಾಲನ ಜಲಮಾರ್ಜನವು ।
ಸುರನದಿ ಮೊದಲಾದ ಸಕಲತೀರ್ಥ ಸ್ನಾನ ।
ಅರಲವ ಸಂಭಾಷಣ ಪರತತ್ವಬೋಧ ।
ಶಿರಬಾಗಿ ವಂದನತ್ರಯ ತಾಪವು ದೂರ ।
ಹರುಷದಿಂದಲಿ ಅವರ ಅರ್ಚನಿ ಹರಿಪೂಜಿ ।

ಸುರಸ ಭೋಜನ ಮಾಡಿಸೆ ಶ್ರೀಹರಿ ನೈವೇದ್ಯ ।
ಪರಿಪರಿ ವಿನಯಾದರ ಶ್ರೀಪತಿಗೆ ಆರುತಿ ।
ಸರಸ ಮಾತುಗಳೆಲ್ಲಾ ಹರಿಮೂರ್ತಿಗಳಿವರು ।
ಕುರುಹು ಬಲ್ಲವರಿಗೆ ದೊರಕರು ಅನ್ಯರಿಗೆ ।
ಗುರುಶ್ರೀಶವಿಠಲ ಇವರ ಸೇವಿಯೊಳಿರಿಸೊ ॥ ೨ ॥

**ತ್ರಿವಿಡಿತಾಳ :**

ಜ್ಞಾನವಿಲ್ಲದ ಸ್ನಾನದಾನ ಯಜ್ಞಂಗಳಿಗೆ ।
ಶ್ರೀನಿವಾಸನು ಪ್ರೀತನಲ್ಲವೆಂದು ।
ಅನಂತ ಶೃತಿಸ್ಮೃತಿವಾಕ್ಯಗಳು ಇಹವೆಂದು ।
ಜ್ಞಾನಿಗಳು ತಿಳಿದು ಪೇಳುವರು ।
ದೀನರಿಂದಲೆ ಜ್ಞಾನ ಭಕುತಿ ವೈರಾಗ್ಯಭಾಗ್ಯ ।
ಈ ನುಡಿಗಳು ಶಾಸ್ತ್ರ ಸಮ್ಮತವು ।
ಅನಾದಿಯಿಂದಲಿ ಹೀಗೆ ಇದ್ದದರಿಂದ ।
ನಾನು ಬೇಡುವೆ ನಿನ್ನವರ ಅನುಗ್ರಹವು ।
ಶ್ರೀನಾಥ ನೀ ದಯಮಾಡಬೇಕಲ್ಲದೆ ।
ನಾನ್ಯಾತರವನಲ್ಲ ಗುರುಶ್ರೀಶವಿಟ್ಠಲ ॥ ೩ ॥

**ಅಟ್ಟತಾಳ :**

ನಾರದರಿಂದ ಪ್ರಲ್ಹಾದಗೆ ಬೋಧ ।
ಶ್ರೀನಾರಸಿಂಹ ನಿನ್ನ ಕರುಣಾ ದರುಶನವು ।
ಆರಿಂದ ವಾಲ್ಮೀಕಿಋಷಿ ಎನಿಸಿದನಯ್ಯಾ ।
ಆ ರಹುಗಣರಾಯಗುಪದೇಶ ಆದಾರಿಂದ ।
ಅರಣ್ಯಕೆ ಪೋದ ಧ್ರುವಗೆ ಸಂಪದ ಹ್ಯಾಗೆ ।
ಆರು ವರಣಿಪರಯ್ಯಾ ಅನಂತ ಭಕ್ತರ ।
ಮಾರಾರಿ ಮೊದಲಾದ ದೇವತೆಗಳಿಗೆಲ್ಲ ।
ಭಾರತಿಪತಿಯಿಂದ ಗತಿಯೆಂದಮ್ಯಾಲಿನ್ನು ।
ಭಾರಿಭಾರಿಗೆ ಪೇಳಲೇನು ಶ್ರೀಕೃಷ್ಣಯ್ಯಾ ।
ತಾರಕರು ಇವರೇ ಇದೆ ನಿನ್ನ ಸಂಕಲ್ಪ ।
ಮಾರಮಣನೆ ನಿನಗಿಂತ ನಿನ್ನವರಲಿ ಆ ।
ಪಾರ ಭಕ್ತಿಯಕೊಡು ಗುರುಶ್ರೀಶವಿಠಲ ॥ ೪ ॥

**ಆದಿತಾಳ :**

ವಿದ್ಯ ಶ್ರೀಪ್ರಾಣದೇವರಿಂದಲಿ ।
ಬುದ್ಧಿ ಬ್ರಹ್ಮನರಾಣಿಯಿಂದಲಿ ।
ಶುದ್ಧಭಕುತಿ ಭಾರತಿಯಿಂದ ।
ರುದ್ರನಿಂದಲಿ ಮನವು ಎರಗಲಿಬೇಕು ।
ಮುದ್ದು ಕೃಷ್ಣಯ್ಯಾ ತತ್ವಗಳಲ್ಲಿ ।
ಯಿದ್ದು ಈ ವರವೆ(ಇವರಂತೆ) ಸಲಹಬೇಕು ಯನ್ನ ।
ಮಧ್ವಪತಿ ಗುರುಶ್ರೀಶವಿಠಲ ।
ಉದ್ಧರಿಸಬೇಕು ನಿನ್ನವರಿಂದಲಿ ॥ ೫ ॥

**ಜತೆ :**

ಹರಿ ನಿನ್ನ ದಾಸರ ದಾಸನೆಂದೆನಿಸೆನ್ನ ।
ಗುರುಶ್ರೀಶವಿಠಲ ಮರೆಯಾದೆ ಸಲಹೊ ॥ ೬ ॥

**ಸುಳಾದಿ : ೦೬ ರಾಗ : – , ಧ್ರುವತಾಳ**

ಹರಿಯೆ ಉದ್ಧರಿಸೆನ್ನ ಪರಮಪುರುಷ ಧೊರಿಯೆ ।
ಇರಳು ಹಗಲು ನಿನಗೆ ಮೊರೆಯಿಡುವೆನೊ ।
ಪರಿಪರಿ ಭವಭಯ ದುರಿತಗಳೋಡಿಸಿ ।
ಕರಿವರದನೆ ನಿನ್ನ ಸ್ಮರಣೆಯನ್ನು ।
ಮರೆಯದಂತೆ ನಿನ್ನ ಚರಣಸೇವೆಯೊಳಿಟ್ಟು ।
ಅರದೂರ ನಿನ್ನ ನಿಜದಾಸನೆನಿಸೊ ।
ಗುರುಹಿರಿಯರಲ್ಲಿ ಪರಮಭಕುತಿಯಿತ್ತು ।
ವಿರಕುತಿ ವಿಷಯದಲ್ಲಿ ಪುಟ್ಟಿಸಯ್ಯಾ ।
ಕರುಣಸಾಗರ ನಿನ್ನ ಮರಳೊಂದು ಬೇಡೋದಿಲ್ಲ ।
ದುರಿತದೂರನೆ ಯಿದುವೊಂದು ಮಾತ್ರ ।
ಕರುಣಿಸಬೇಕಯ್ಯಾ ಭಕುತವತ್ಸಲ ಸ್ವಾಮಿ ।
ಸರುವರೂಪಾತ್ಮಕ ಸರುವರೊಡಿಯಾ ।
ಚರ ಅಚರಗಳಲ್ಲಿ ಪರಿಪರಿ ನಿನ್ನರೂಪ ।
ಕುರುಹು ಕಾಂಬುವ ಸುಜ್ಞಾನದಿಂದ ।
ಪರಮ ಭಕುತಿಕೊಟ್ಟು ಗರುಡವಾಹನ ನಿನ್ನ ।
ಪರಮಾನಂದವಾದ ವಿಹಾರವ ।

ಅರಲವ ಬಿಡದಲೆ ಚಿಂತಿಸುವಂತೆ ಮಾಡೋ ।
ಗುರುಶ್ರೀಶವಿಠಲನೆ ಕಾವದೇವ ॥ ೧ ॥

**ಮಟ್ಟತಾಳ :**

ಇಂದಿರೇಶನೆ ನಿನ್ನ ಛಂದವುಳ್ಳರೂಪ ।
ನಂದದಿ ನೋಡುವಾನಂದಕಿಂತ ಭಾಗ್ಯ ।
ಹಿಂದೆ ಕಂಡವರಿಗಿಲ್ಲ ಹಿಂದುಮುಂದು ಕಾಣೆ ।
ಮಂದನು ಯಿವನೆಂದು ತಂದುಕೊಳ್ಳದೆ ।
ಸಂದರುಶನವೀಯೋ ಸುಂದರಮೂರುತಿ ।
ವಂದಿಸುವೆನು ನಿನಗೆ ಗುರುಶ್ರೀಶವಿಠಲಯ್ಯಾ ॥ ೨ ॥

**ತ್ರಿವಿಡಿತಾಳ :**

ದೇವ ಭಕುತರ ಬಿಡದೆ ಕಾವ ಪ್ರಭು ನೀನೆಂದು ।
ಭಾವಶುದ್ಧದಿ ಬಿನ್ನಪವ ಮಾಡಿದೆನೊ ।
ಆವಾವ ಜನ್ಮಗಳ ಈವದಕ್ಕೆ ಯೆನಗೆ ।
ನೋವು ಕಾಣದು ಬಿಡದೇ ನಿತ್ಯ ನಿನ್ನ ।
ಸೇವಕರೊಳುಯಿಟ್ಟು ಸೇವಕನೆನಿಸಯ್ಯಾ ।
ಶ್ರೀವರ ಗುರುಶ್ರೀಶವಿಠಲಯ್ಯನೇ ॥ ೩ ॥

**ಅಟ್ಟತಾಳ :**

ಅಲ್ಪಯೋಗ್ಯತಿ ಎನ್ನದಾದಗೋಸುಗ ಸ್ವಾಮಿ ।
ಸ್ವಲ್ಪಸ್ವಲ್ಪಕೆ ನಿನಗಾಲ್ಪರಿವೆನೊ ಅಹಿ ।
ತಲ್ಪ ನಿನ್ನ ಭಕ್ತರಂತೆ ನಂಬಲಾರೆ ।
ಕಲ್ಪಕಲ್ಪಗಳಲ್ಲಿ ಯೆನ್ನಂಥ ಜೀವರು ।
ಸ್ವಲ್ಪವಾದರು ಇರಬಹುದೋ ಅವರನ್ನ ।
ಬಲ್ಪರಿಯಲಿ ನೀನು ಸಲಹಲಿಲ್ಲವೆ ದೇವ ।
ಕಲ್ಪಿಸಿದವರನ್ನ ಕಡೆಹಾಯಿಸುವ ಸಂ ।
ಕಲ್ಪ ನಿನ್ನದುಯೆಂದು ನಂಬಿದೆ ಸತ್ಯಸಂ ।
ಕಲ್ಪ ಪೋಷಿಸೊ ಗುರುಶ್ರೀಶವಿಠಲ ಸುಖ ।
ತಲ್ಪ ನಿನಗಲ್ಲದೆ ಅನ್ಯರಿಗೆ ಅಲ್ಪರಿಯೆ ॥ ೪ ॥

**ಆದಿತಾಳ :**

ಎಷ್ಟು ಪೇಳಲಿ ನಿನಗಷ್ಟು ಅರಿಕಿಯಿನ್ನು ।
ಗುಟ್ಟು ಯೇನಿದರೊಳು ಕೊಟ್ಟದ್ದು ಕೊಡು ನಿನ್ನ ।
ಬಿಟ್ಟು ಅನ್ಯರಿಗೆ ಎಳ್ಳಷ್ಟು ಕೇಳುವನಲ್ಲ ।
ಕೃಷ್ಣ ಯೆನಗೆ ನೀನು ಇಷ್ಟಮೂರುತಿ ಎನ್ನ ।
ದೃಷ್ಟಿಗೆ ತೋರೊ ನಿತ್ಯ ಸ್ಪಷ್ಟ ಸುಜ್ಞಾನವಿತ್ತು ।
ಶಿಷ್ಟರ ದಯವನ್ನು ಹುಟ್ಟಿಸೊ ಯನ್ನಲ್ಲಿ ।
ಭ್ರಷ್ಟನು ಇವನೆಂದು ಸಿಟ್ಟುಮಾಡದೆ ಕಾಯೋ ।
ಕೊಟ್ಟಕೊನಿಗೆ ನಿನಗೆ ಬಿಟ್ಟೀತೆ ಯೆನ್ನ ಭಾರ ।
ಘಟ್ಯಾಗಿ ನಿನ್ನ ಪಾದ ಮುಟ್ಟಿ ಭಜಿಸುವೆನಯ್ಯಾ ।
ಶಿಷ್ಟರ ಗುರುಶ್ರೀಶವಿಟ್ಠಲ ದಯವನ್ನು ।
ಯಿಟ್ಟು ಸಾಕಲಿ ಬೇಕು ಸೃಷ್ಟೇಶ ನಿನ್ನವರ ॥ ೫ ॥

**ಜತೆ :**

ಈಶ ನಿನ್ನ ನಿಜದಾಸರಂತಲ್ಲ ಆ ।
ಭಾಸಕ ನಾ ಗುರುಶ್ರೀಶವಿಠಲ ಪೊರಿಯೊ ॥ ೬ ॥

॥ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು॥